ಫಲಜ್ಯೋತಿಷ್ಯ-ಜ್ಯೋತಿರ್ಮಾಲಾ

ನಕ್ಷತ್ರ: ೧

# ವಧೂವರರ ಜ್ಯೋತಿಷ್ಯ



ಲೇಖಕರು :
ಶ್ರೀ ಎನ್. ಕೆ. ಜೋಗಳೇಕರ
ಧಾರವಾಡ.



ತೇಜಸ್ವೀ ನಗರ, ಕಲಘಟಗಿ ರೋಡ, ಧಾರವಾಡ-೨

# ಸಮರ್ಪಣ



ಜ್ಯೋತಿಷ್ಯ ಜ್ಞಾನದ ಬೀಜವನ್ನು ನನ್ನ ಮನದಲ್ಲಿ ಬಿತ್ತಿ ನೀರೆರೆದು ಪೋಷಿಸಿದ, ನನ್ನ ಪರಮ ಪೂಜ್ಯ ತಂದೆಯವರಾದ

**ದಿ. ಕಲ್ಲೋಪಂತ ಜೋಗಳೇಕರ**

ಅವರ ಚರಣ ಸನ್ನಿಧಿಯಲ್ಲಿ, ಈ ನನ್ನ ಪ್ರಥಮ ಪುಷ್ಪವನ್ನು ಪಿತೃಭಕ್ತಿ ಮತ್ತು ಗುರುಭಕ್ತಿಗಳೊಂದಿಗೆ ಸಮರ್ಪಿಸುತ್ತೇನೆ.

—ಲೇಖಕ

# ಪರಿವಿಡಿ

—೦—

# ಮುನ್ನುಡಿ

ಶ್ರೀಮಾನ್ ಎಸ್. ಕೆ. ಜೋಗಳೇಕರರು ತಮ್ಮ ಈ ಪುಸ್ತಕಕ್ಕೆ ನನ್ನ ಮುನ್ನುಡಿಯನ್ನು ಅಪೇಕ್ಷಿಸಿದರು. ಅವರ ಈ ಅಪೇಕ್ಷೆಗೆ ಕಾರಣ, ಸಾಹಿತ್ಯ ನಿರ್ಮಿತಿಯಲ್ಲಿ ನಾನು ಬಹುಕಾಲ ಕಾರ್ಯ ಮಾಡಿರುವೆನೆಂಬ ಅವರ ಅಭಿಮಾನವೇ ಇರಬಹುದು. ಆದರೆ ಸಾಹಿತ್ಯಿಕರಿಗೆ ಜ್ಯೋತಿಷ್ಯದಲ್ಲಿ ಪ್ರವೇಶವಿರುವುದು ತೀರ ಕಡಿಮೆ; ಏಕೆಂದರೆ ಅವರು ಭಾವನೆ-ಕಲ್ಪನೆಗಳಿಂದ ಭವಿಷ್ಯವನ್ನು ಕಾಣುವವರೇ ಹೊರತು, ಗ್ರಹ-ನಕ್ಷತ್ರಗಳ ಗಣಿತ-ಗುಣಿತದಿಂದ ಕಾಣುವವರಲ್ಲ. ಆದರೆ ಪ್ರಾಚೀನ ಕನ್ನಡದ ಸಾಹಿತ್ಯಾಭ್ಯಾಸಿಗಳಿಗೆ ಸಾಹಿತ್ಯದೊಂದಿಗೆ ಆನುಷಂಗಿಕವಾಗಿ ಜ್ಯೋತಿಷ್ಯದ ಪರಿಚಯವು ಬೇಡವೆಂದರೂ ಆಗುವದು. ಇದಕ್ಕೆ ಕಾರಣವೇನೆಂದರೆ, ನಮ್ಮ ಜ್ಯೋತಿಷ್ಯ ಶಾಸ್ತ್ರಜ್ಞರು ಜ್ಯೋತಿಷ್ಯವನ್ನು ಸಾಹಿತ್ಯವನ್ನಾಗಿ ಮಾಡಿ ಇರಿಸಿರುವರು. ಅವರು ರಚಿಸಿದ ಗ್ರಂಥಗಳನ್ನು ಓದುವಾಗ, ನಾವು ಕಾವ್ಯವನ್ನು ಓದುವೆವೊ ಎಂಬುದು ನಮಗೆ ತಿಳಿಯದಂತಾಗುವುದು. ಇದರ ಪರಿಣಾಮ ಫಲವೆಂದರೆ, ನಮ್ಮ ಸಾಹಿತ್ಯದ ಅಭ್ಯಾಸಿಗಳಿಗೆ, ಕುರಿತೋದದೆಯೂ ಜ್ಯೋತಿಷ್ಯ ಶಾಸ್ತ್ರದ ಪರಿಚಯವಾಗುವುದು. ಕ್ರಿ. ಶ. ೧೦೪೯ರಲ್ಲಿ ಬರೆದು ಮುಗಿಸಿದ ಶ್ರೀಧರಾಚಾರ್ಯನೆಂಬ ಕವಿಯು "ಜಾತಕ ತಿಲಕ" ಎಂಬ ಕನ್ನಡ ಗ್ರಂಥವನ್ನು ಓದಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿರುವಾಗ, ಜ್ಯೋತಿಷ್ಯಶಾಸ್ತ್ರದ ಕೂಲಂಕೂಷ ಪರಿಚಯವು ನನಗೆ ಅನಿವಾರ್ಯವೆನಿಸಿತು. ಅದರಂತೆಯೇ ೧೩ನೆಯ ಶತಮಾನದ ಕೊನೆಯ ಭಾಗದಲ್ಲಿದ್ದ "ಅರ್ಹದ್ದಾಸ" ಎಂಬ ಕನ್ನಡ ಕವಿಯು, ಮಳೆಯ ಭವಿಷ್ಯವನ್ನು ಕುರಿತು ಬರೆದ "ರಟ್ಟಮತ" ಎಂಬ ಗ್ರಂಥವನ್ನು ಅಭ್ಯಸಿಸುವಾಗಲೂ ಗ್ರಹ-ನಕ್ಷತ್ರಗಳ ಗತಿಯ ಪರಿಚಯ ಅವಶ್ಯಕವೆನಿಸಿತು. ಮಾನವನ ದೀರ್ಘಾಯುಷ್ಯವನ್ನು ಹೇಳುವುದಕ್ಕಾಗಿ ಶ್ರೀಧರಾಚಾರ್ಯನು ಬರೆದ ಈ ಪದ್ಯವನ್ನು ನೋಡಿರಿ.

"ತ್ರಿದಶಾಧೀಶ್ವರವಂಶಿ್ರ ಶೀತಕರರಂಬೀಯಿರ್ವರುಂ ಕರ್ಕಗೇ-
ಹದೊಳಿರ್ದಂದು, ಶಶಾಂಕಸೂನು-ಸಿತರೆಂಬೀಯಿರ್ವರಂ
ಕೇಂದ್ರಗೇಹದೊಳಿರ್ದಂದು ರಿಪು-ತ್ರಿ-ಲಾಭಗೃಹದೊಳ್ ಮಿಕ್ಕನ್ನ
ರಿರ್ದಂದು ಪುಟ್ಟಿದ ಮರ್ತ್ಯಂಗೆ ಚಿರಾಯುಂ ಸಂಭವಿಸುಗುಂ
ಸಮ್ಯಕ್ತ್ವರತ್ನಾಕರಾ॥"

ಉದಾಹರಣೆಗೆಂದು ಇದೊಂದು ಪದ್ಯವನ್ನು ಇಲ್ಲಿ ಉದ್ಧರಿಸಿದ್ದೇನೆ. ಇದೊಂದೇ ಪದ್ಯವನ್ನು ಅರ್ಥಯಿಸಬೇಕಾದರೂ, ಜ್ಯೋತಿಷ್ಯಶಾಸ್ತ್ರದ ಪರಿಚಯವಿಲ್ಲದವರಿಗೆ ಎಂದೂ ಸಾಧ್ಯವಿಲ್ಲದ ಮಾತು. ಹೀಗಿರುವಾಗ ಈ ಶಾಸ್ತ್ರದ ಗ್ರಂಥಗಳನ್ನು ಕಾವ್ಯಗಳನ್ನಾಗಿ ಬರೆದ ಎಷ್ಟೋ ಜನ ಪ್ರಾಚೀನ ಕವಿಗಳ ಗ್ರಂಥಗಳನ್ನು ಅರ್ಥಮಾಡಿಕೊಳ್ಳಬೇಕಾಗಿ ಬಂದಾಗ, ಆ ಶಾಸ್ತ್ರದ ಪರಿಚಯವಾಗದೆ ಉಳಿಯುವುದೇ ? ನನಗೂ ಜ್ಯೋತಿಷ್ಯಕ್ಕೂ ಬಾದ ಸಂಬಂಧ ಈ ಬಗೆಯದು. ಇದನ್ನರಿತ ಶ್ರೀ ಜೋಗಳೇಕರರು ನನ್ನಿಂದ ಮುನ್ನುಡಿಯನ್ನು ಬಯಸಿದುದರಲ್ಲಿ ಒಂದು ರೀತಿಯ ಔಚಿತ್ಯವಿದೆಯೆಂದು ಭಾವಿಸುವೆನು.

ಶ್ರೀ. ಜೋಗಳೇಕರರ ಜ್ಯೋತಿಷ್ಯಜ್ಞಾನ, ಇವರ ಮನೆತನದ ಪರಂಪರೆಗೆ ಸೇರಿದುದು. ಇವರ ತಂದೆಯವರಿಂದಲೇ ಇವರಿಗೆ ಅದು ಬಳುವಳಿಯಾಗಿ ದೊರೆತಿದೆ. ಅಲ್ಲದೆ ಭವಿಷ್ಯವಾದಿಗಳಿಗೆ ಅವಶ್ಯಕವಾದ ಒಳಗಣ್ಣ ನೋಟವು ಇವರಿಗೆ ನಿಸರ್ಗವಿತ್ತ ಕಾಣಿಕೆಯಾಗಿದೆ. ವಯಸ್ಸು ಹಿರಿಯದಲ್ಲವಾದರೂ ಇವರು ತಮ್ಮ ಜ್ಯೋತಿಷ್ಯಜ್ಞಾನವನ್ನು ಹಿರಿಯದನ್ನಾಗಿಸಿಕೊಂಡಿದ್ದಾರೆ. ಈ ಪುಸ್ತಕವನ್ನು ನೋಡಿದವರಿಗೆ ಹೇಳಿದ ಈ ಮಾತು ಪ್ರತೀತಿಗೆ ಬಾರದೆ ಇರದು.

ಇದೊಂದು ಫಲಜ್ಯೋತಿಷ್ಯವಿಷಯಕ ಗ್ರಂಥ. ವಧೂ-ವರರ ಹೊಂದಿಕೆ ವೈವಾಹಿಕ ಸೌಖ್ಯ, ಸಂತಾನ ವಿಚಾರ, ಸಂತಾನ ಸೌಖ್ಯದ ವಿಚಾರ ಇವೇ ಮೊದಲಾದ, ಜನಸಾಮಾನ್ಯರಿಗೆ ಅತ್ಯಂತ ಅವಶ್ಯಕವಾದ ವಿಷಯಗಳನ್ನು ಕುರಿತು ಜ್ಯೋತಿಷ್ಯಶಾಸ್ತ್ರದ ಪರಿಚಯವನ್ನು ಇದರಲ್ಲಿ ವಿವರ-ವಿವರವಾಗಿ ಸಂಗ್ರಹಿಸಿಕೊಟ್ಟಿರುವರು. ಸಾವಿರಾರು ವರ್ಷಗಳಿಂದಲೂ ನಮ್ಮ ಜನತೆ ಇಂತಹ ಮಾತುಗಳ ಮೇಲೆ ಶ್ರದ್ಧೆ ವಿಶ್ವಾಸಗಳನ್ನು ಇರಿಸಿಕೊಂಡು ಬಂದಿದೆ.

ಎಲ್ಲಿ ಮಾತಿಗೂ ಪ್ರತ್ಯಕ್ಷ ಪ್ರಮಾಣಗಳನ್ನು ಕೇಳುವ ಇಂದಿನ ಜನರು ಜ್ಯೋತಿಷ್ಯಶಾಸ್ತ್ರವನ್ನು ಹಿಂದಿನಂತೆ ಆ ಶ್ರದ್ಧೆ-ವಿಶ್ವಾಸಗಳಿಂದ ನೋಡು ವರೋ ಇಲ್ಲವೋ ಎಂಬುದು ಸಂದೇಹದ ಸಂಗತಿಯಾದರೂ, ವಿಜ್ಞಾನ ಪ್ರಗತಿ ಯಿಂದ ನಾಸ್ತಿಕಪ್ರವೃತ್ತಿಗಿಳಿದ ಪಾಶ್ಚಿಮಾತ್ಯದೇಶಗಳಲ್ಲಿಯೂ ಫಲಜ್ಯೋತಿಷ್ಯದ ಪ್ರಸ್ಥ ಬೆಳೆಯುತ್ತ ನಡೆದುದು ಆಶ್ಚರ್ಯಪಡುವಂತಹ ಸಂಗತಿಯಾಗಿದೆ. ಅಲ್ಲಿ ಹೀಗಿರುವಾಗ ಇನ್ನೂ ಭಾವನಾತ್ಮಕವಾಗಿಯೇ ಇರುವ ಕನ್ನಡ ಜನತೆ ಜ್ಯೋತಿಷ್ಯವನ್ನು ನಂಬದೆ ಇರುವದೇ ? ಅದು ಸಾಕಷ್ಟು ನಂಬುತ್ತಿದೆಯೆಂಬುದಕ್ಕೆ ಪ್ರತ್ಯಕ್ಷ ಸಾಕ್ಷಿಯೆಂದರೆ, ನಮ್ಮ ಪತ್ರಿಕೆಗಳ ಅಂಕಣ ಗಳಲ್ಲಿ ತುಂಬಿ ತುಂಬಿ ಬರುತ್ತಿರುವ ವಾರ-ಮಾಸ ಭವಿಷ್ಯಗಳು ಧರ್ಮ-ನೀತಿ ಗಳಿಂದ ದೂರ ನಿಂತವರೂ ಜ್ಯೋತಿಷ್ಯಶಾಸ್ತ್ರ ಹೇಳುವ ಭವಿಷ್ಯಗಳನ್ನು ಮಾನ ಸಾರೆ ಬಯಸುತ್ತಿದ್ದಾರೆ.

ಶ್ರೀ ಜೋಗಳೇಕರರು ಈ ಪುಸ್ತಕವನ್ನು ಬರೆದು ಒದಗಿಸಿ, ನಮ್ಮ ಜನತೆಗೆ ಒಂದು ಅನುಕೂಲತೆಯನ್ನೇ ಕಲ್ಪಿಸಿಕೊಟ್ಟಿದ್ದಾರೆಂದು ಹೇಳಬಹುದು. ವಧೂ-ವರರ ಜಾತಕಗಳನ್ನು ಹೊಂದಿಸಿ ನೋಡಲೇಬೇಕೆನ್ನುವ ಭಾವುಕ ಜನ ರಿಗೆ, ಈ ಸಾಂಪ್ರದಾಯಿಕ ಶಾಸ್ತ್ರಶುದ್ಧ ವಿಷಯಗಳಿಂದ ಕೂಡಿದ ಈ ಪುಸ್ತಕ ತುಂಬ ಉಪಯುಕ್ತವೆನಿಸಬಲ್ಲದು. ಕನ್ನಡದಲ್ಲಿ ಇದುವರೆಗೆ ಇಲ್ಲದಂತಹ ಒಂದು ಅವಶ್ಯಕ ಗ್ರಂಥವನ್ನು ಬರೆದ ಈ ಲೇಖಕರು ನಿಜವಾಗಿಯೂ ಶ್ರದ್ಧಾ ವಂತರ ಧನ್ಯವಾದಗಳಿಗೆ ಪಾತ್ರರಾಗಿದ್ದಾರೆ.

ಧಾರವಾಡ

೧೫-೧೧-೧೯೫೭

**ಬೆಟಗೇರಿ ಕೃಷ್ಣಶರ್ಮ**

# ಲೇಖಕನ ನಾಲ್ಕು ಮಾತುಗಳು

'ಯಥಾ ಶಿಖಾ ಮಯೂರಾಣಾಂ ನಾಗಾನಾಂ ಮಣಯೋ ಯಥಾ
ತದ್ವಿಧಃ ವೇದಾಂಗಾನಾಂ ಜ್ಯೋತಿಷ್ಯಂ ಮೂರ್ಧ್ನಿ ವರ್ತತೆ ।।'

ಈ ಶ್ಲೋಕವು ಜ್ಯೋತಿಷ್ಯಶಾಸ್ತ್ರದ ಘನತೆಯನ್ನು ವ್ಯಕ್ತಪಡಿಸುತ್ತದೆ. ಇಂಥ ಗಹನವಾದ ವಿಷಯದ ಮೇಲೆ ಎಷ್ಟು ಬರೆದರೂ ಕಡಿಮೆಯೇ. ನಾಸ್ತಿಕನೂ ಕೂಡ ಈ ಶಾಸ್ತ್ರದ ಮುಂದೆ ಕ್ಷಣವಾದರೂ ತಲೆತಗ್ಗಿಸುತ್ತಾನೆ. ಇದಕ್ಕೆ ಶಾಸ್ತ್ರದ ಪ್ರತ್ಯಕ್ಷತೆಯೇ ಕಾರಣ.

"ಅಪ್ರತ್ಯಕ್ಷಂತು ಶಾಸ್ತ್ರಾಣಿ ವಿವಾದಸ್ತೇಷು ಕೇವಲಂ
ಪ್ರತ್ಯಕ್ಷಂ ಜ್ಯೋತಿಷ್ಯಂ ಶಾಸ್ತ್ರಂ ಚಂದ್ರಾರ್ಕೌ ಯತ್ರ ಸಾಕ್ಷಿಣೌ"

ಪ್ರಸ್ತುತ 'ಗ್ರಂಥವು' ವಧೂವರರ ತೊಂದರೆಯನ್ನು ಹೋಗಲಾಡಿಸುವಲ್ಲಿ ಪ್ರಥಮ ಹೆಜ್ಜೆಯಾಗಿದೆ. ಇಲ್ಲಿ ವಿವಾಹಕ್ಕೆ ಉಪಯುಕ್ತವಾಗಿರುವ ಅನೇಕ ವಿಷಯಗಳನ್ನು ವಿವರಿಸಲಾಗಿದೆ. ವಿವಾಹದ ಕಾಲಕ್ಕೆ ದೊಡ್ಡ ಸಮಸ್ಯೆಯಾಗಿರುವ 'ಏಕನಾಡಿ' ಹಾಗೂ 'ಮಂಗಳ' ವಿಚಾರವನ್ನು ಸ್ಪಷ್ಟೀಕರಿಸಲಾಗಿದೆ. ಇದಲ್ಲದೆ ಸಂತಾನದ ವಿಷಯದಲ್ಲಿ ಕೂಡ ಕೆಲವು ಉಪಯುಕ್ತವಾದ ವಿಷಯಗಳನ್ನು ಬರೆದಿದೆ. ಆದ್ದರಿಂದ ವಿವಾಹಾಕಾಂಕ್ಷಿಗಳಿಗಿರುವಷ್ಟೇ ವಿವಾಹಿತರಿಗೂ ಈ ಪುಸ್ತಕ ಉಪಯುಕ್ತವಾಗಿದೆ.

ಈ ಪುಸ್ತಕಕ್ಕೆ ಒಂದು ಚೊಕ್ಕಟವಾದ ಮುನ್ನುಡಿಯನ್ನು ಬರೆದುಕೊಟ್ಟ ಕವಿಭೂಷಣ ಬೆಟಗೇರಿ ಕೃಷ್ಣಶರ್ಮರಿಗೆ ನಾನು ಅತ್ಯಂತ ಋಣಿಯಾಗಿದ್ದೇನೆ. ಅವರು ಕನ್ನಡದ ಹಿರಿಯ ಸಾಹಿತಿಗಳಲ್ಲಿ ಒಬ್ಬರು ಎಂಬುದನ್ನಷ್ಟೇ ಅರಿತಿದ್ದೆ; ಆದರೆ ಜ್ಯೋತಿಷ್ಯ ಶಾಸ್ತ್ರದಲ್ಲೂ ಅವರಿಗಿರುವ ಗತಿಯನ್ನು ಕಂಡಾಗ ಅಚ್ಚರಿಗೊಂಡೆ. ನನ್ನನ್ನು ಬಹಳೇ ಆತ್ಮೀಯನಾಗಿ ಕಂಡು ಚಿಕ್ಕವನಾದ ನನ್ನ ಈ ಕೆಲಸಕ್ಕೆ ಅವರು ಮೆಚ್ಚುಗೆಯನ್ನು ವ್ಯಕ್ತಪಡಿಸಿ ಪ್ರೋತ್ಸಾಹಿಸಿದ್ದಾರೆ. ಈ ಪುಸ್ತಕದ ಕರಡು ಪ್ರತಿಯನ್ನು ಓದಿ ಪರಿಶ್ರಮವಹಿಸಿ ತಿದ್ದಿ, ಸೂಕ್ತ ಸಲಹೆ ಕೊಟ್ಟಿದ್ದಾರೆ. ಅವರ ನೆರವಿಲ್ಲದೆ ಈ ಪುಸ್ತಕವು ಈ ರೂಪದಲ್ಲಿ ಬೆಳಕಿಗೆ ಬರುತ್ತಿರಲಿಲ್ಲ; ಅವರ ಉಪಕಾರ ಸ್ಮರಣೆ ಎಷ್ಟು ಮಾಡಿದರೂ ಕಡಿಮೆಯೇ.

ನನ್ನ ಬಾಲ್ಯಮಿತ್ರರಾದ ಶ್ರೀ. ಜಿ. ವ್ಹಿ. ಕುಲಕರ್ಣಿ, ಬಿ. ಎ. (ಆನರ್ಸ್) ಇವರನ್ನು ನಾನಿಲ್ಲಿ ನೆನೆಯದಿರಲಾರೆ. ಈ ಪುಸ್ತಕವನ್ನು ಬರೆಯುವ ವಿಚಾರ

ವನ್ನು ತಲೆಯಲ್ಲಿ ಬಿತ್ತಿದವರೇ ಇವರು. ನನ್ನ ಜೀವನದಲ್ಲಿ ಆತ್ಮೀಯರಾಗಿ ಬೆರೆತು ಒಂದು ರೀತಿಯ ಬೆಂಬಲವಾಗಿ ಇರುವ ಇವರ ಉಪಕಾರ ಸ್ಮರಣೆಯು ನನ್ನ ಕರ್ತವ್ಯವಾಗಿದೆ.

ಇನ್ನು, ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿ, ತಮ್ಮ ವೈಯಕ್ತಿಕ ತೊಂದರೆಗಳನ್ನು ಬದಿಗಿರಿಸಿ, ಸಕಾಲದಲ್ಲಿ ಇದನ್ನು ಒದಗಿಸಿಕೊಟ್ಟ ಶ್ರೀಮಾನ್ ನಾ. ಅ. ಮೊಸಕೇರಿಯವರಿಗೆ ನಾನು ಕೃತಜ್ಞನಾಗಿದ್ದೇನೆ.

ಪಂಡಿತ ಕೇಶವಶರ್ಮಾ ಗಲಗಲಿಯವರು ಜ್ಯೋತಿಷ್ಯಶಾಸ್ತ್ರದ ಅಧ್ಯಯನದಲ್ಲಿ ತುಂಬಾ ಪರಿಶ್ರಮ ವಹಿಸಿದವರೆಂಬುದನ್ನು ನಾನು ಬೇರೆ ಹೇಳಬೇಕಾಗಿಲ್ಲ. ಜ್ಞಾನವಯೋವೃದ್ಧರೂ ಸಹೃದಯರೂ ಆದ ಅವರು ನನ್ನನ್ನು ಆಶೀರ್ವದಿಸಿದ್ದಕ್ಕಾಗಿ ಉಪಕೃತನಾಗಿದ್ದೇನೆ.

ಸಂತಾನ ಹಾಗೂ ಮಾರಕೆಯ ಕುಂಡಲಿಯ ವಿಷಯವನ್ನು ನಾನು ಹಿಂದಿನಿಂದ ಬರೆದು ಕೂಡಿಸಿದ್ದರಿಂದ, ಈ ಪುಸ್ತಕದ ಗಾತ್ರವು ನಾನು ಊಹಿಸಿದ್ದಕ್ಕಿಂತ ಹೆಚ್ಚಾಯಿತು. ಆದ್ದರಿಂದ ನಾನು ಇದರ ಬೆಲೆಯನ್ನು ಅನಿವಾರ್ಯವಾಗಿ ಮೊದಲು ಪ್ರಕಟಪಡಿಸಿದ್ದಕ್ಕಿಂತ ಹೆಚ್ಚು ಮಾಡಬೇಕಾಯಿತು. ಸಹೃದಯರ ಚಿದಾಕಾಶದಲ್ಲಿ ನಾನು ತೂರಿಬಿಟ್ಟ ಮೊದಲನೆಯ ನಕ್ಷತ್ರ ಇದಾಗಿದೆ. ನಾನು ಇದೇ 'ಫಲಜ್ಯೋತಿಷ್ಯ ಜ್ಯೋತಿರ್ಮಾಲೆ' ಯಿಂದ ಇನ್ನೂ ಅನೇಕ ನಕ್ಷತ್ರಗಳನ್ನು ಪ್ರಕಟಗೊಳಿಸಬೇಕೆಂದಿದ್ದೇನೆ. ಕನ್ನಡ ಜನತೆ ನನ್ನ ಈ ಮೊದಲನೆಯ ನಕ್ಷತ್ರವನ್ನು ಪ್ರೀತಿಯಿಂದ ತಮ್ಮದನ್ನಾಗಿರಿಸಿಕೊಂಡಷ್ಟು ನನಗೆ ಶಕ್ತಿ ಬರುತ್ತದೆ; ಮತ್ತು ನನ್ನ ಮುಂದಿನ ಸೇವೆಯಲ್ಲಿ ಹೆಚ್ಚು ದೃಢತೆ ಬರುತ್ತದೆಂದು ನಂಬಿದ್ದೇನೆ.

ಧಾರವಾಡ  ಇತಿ ತಮ್ಮ ವಿಶ್ವಾಸಿ

೧೫-೧೧-೧೯೫೭  **ಎನ್. ಕೆ. ಜೋಗಳೇಕರ**

ತಪೂವರರ ಜ್ಯೋತಿಷ್ಯ ಗ್ರಂಥದ ಚತುರ್ಥ ಮುದ್ರಣದ ಪ್ರತಿಗಳು ಮುಗಿದು ಅನೇಕ ವರುಷಗಳಾದವು. ಅನೇಕ ಜ್ಯೋತಿಷಿಗಳ ಅಭಿಮಾನ – ಭಿನ್ನಹದ ಮೂಲಕ ಈ ಪಂಚಮ ಮುದ್ರಣ ಶಕ್ಯವಾಯಿತೆಂದು ತಿಳಿಸಲು ಸಂತೋಷವೆನಿಸುತ್ತದೆ.

ಇದನ್ನು ಮುದ್ರಿಸಿ ಕೊಟ್ಟ ಸರಸ ಮುದ್ರಣಾಲಯದ ಒಡೆಯರಿಗೆ ಸಿಬ್ಬಂದಿಗಳಿಗೆ ನನ್ನ ಧನ್ಯವಾದಗಳು.

ಶ್ರೀಃ

# ವಧೂವರರ ಜ್ಯೋತಿಷ್ಯ

## ೧. ವಿವಾಹ ಮತ್ತು ಜ್ಯೋತಿಷ್ಯ

ವಿವಾಹವೆಂಬುವುದು ಎರಡು ಹೃದಯಗಳ ಮಿಲನ. ಇದು ಎರಡು ವಸ್ತುಗಳ ಮಿಲನಕ್ಕಿಂತ ತೀರ ಭಿನ್ನವಾಗಿರುವುದು. ಮಾನವ ಜನಾಂಗಕ್ಕೆ ಸುಸಂಸ್ಕೃತ ಜನಾಂಗವೆನ್ನುತ್ತೇವೆ. ಆಹಾರ, ನಿದ್ರೆ, ಭಯ, ಮೈಥುನ ಇವು ಮನುಷ್ಯ ಹಾಗೂ ಪ್ರಾಣಿಗಳಿಗೆ ಸಮಾನವಾಗಿದ್ದರೂ, ಧರ್ಮ ಎಂಬು ದೊಂದು ಮಾತ್ರ ಮನುಷ್ಯನನ್ನು ಪ್ರಾಣಿವರ್ಗದಿಂದ ಬೇರ್ಪಡಿಸುತ್ತದೆ.

"ಆಹಾರ ನಿದ್ರಾಭಯ ಮೈಥುನಂಚ
ಸಾಮಾನ್ಯಮೇತತ್–ಪಶುಭಿರ್ನರಾಣಾಂ
ಧರ್ಮೋಹಿ ತೇಷಾಂ ಅಧಿಕೋ ವಿಶೇಷಃ
ಧರ್ಮೇಣ ಹೀನಃ ಪಶುಭಿಃ ಸಮಾನಃ"

ಮಾನವನ ಧರ್ಮ–ಸಂಸ್ಕಾರಗಳಲ್ಲಿಯಾಗಲಿ, ಸಂಸ್ಕೃತಿಯ ಪ್ರಗತಿಯ ಘಟ್ಟಗಳಲ್ಲಾಗಲಿ, ಮದುವೆ ಎಂಬುದು ಬಹಳ ಮಹತ್ವದ್ದಾಗಿದೆ. ಮದುವೆ ಯಾದ ಮೇಲೆ, ಒಂದು ಹೆಣ್ಣು ಜೀವ ಗಂಡುಜೀವದ ಜೀವನದಲ್ಲಿ ಬರುತ್ತದೆ. ಭಾರತೀಯ ವೈವಾಹಿಕ ಪದ್ಧತಿಯಂತೆ ಬಗೆದರೆ, ಅದು ಆಗ ತನ್ನ ಮನೆ ಮಾರನ್ನು ಬಿಟ್ಟು ಗಂಡನೇ ಸರ್ವಸ್ವವೆಂದು ಹಿಂಬಾಲಿಸುತ್ತದೆ. ಆ ಜೀವ ಕೇವಲ 'ಹೆಂಡತಿ' ಎಂದು ಸಂಬೋಧಿತವಾಗಿದ್ದರೂ ಅದರ ಪಾತ್ರ ಬಹಳ ಮಹತ್ವದ್ದು. ಇದನ್ನೆ - ಸುಭಾಷಿತದಲ್ಲಿ ;

"ಕಾರ್ಯೇಷು ದಾಸೀ ಕರಣೇಷು ಮಂತ್ರೀ
ರೂಪೇಚ ಲಕ್ಷ್ಮೀ ಕ್ಷಮಯಾ ಧರಿತ್ರೀ
ಸ್ನೇಹೇಚ ಮಾತಾ ಶಯನೇಷು ರಂಭಾ
ಷಾಡ್ಗುಣ್ಯಯುಕ್ತಾ ಖಲುಧರ್ಮಪತ್ನೀ"

—ಎಂದು ಹೇಳಿದ್ದಾರೆ.

ಆದ್ದರಿಂದ ಎಲ್ಲರೂ ಇಂತಹ ಧರ್ಮಪತ್ನಿಯನ್ನು ಬಯಸುವುದು ಸ್ವಾಭಾವಿಕ; ಆದರೆ ಕೇವಲ ಬಯಸುವದರಿಂದ ಇಂತಹ ಪತ್ನಿ ದೊರೆಯಲಾರಳು.

ಇಂದು ಸಮಾಜದಲ್ಲಿ ನಡೆಯುವ ಮದುವೆಗಳನ್ನು ಪರಿಶೀಲಿಸಿದರೆ 'ಒಂದು ಹೆಣ್ಣಿಗೆ ಒಂದು ಗಂಡು; ಒಂದು ಗಂಡಿಗೆ ಒಂದು ಹೆಣ್ಣು' ಎಂಬ ರೀತಿಯಿಂದ ನಡೆದಿವೆ. ಈ ಕಾರಣದಿಂದ ಸಮಾಜದಲ್ಲಿ ವಿಷಮ ವಿವಾಹಗಳು ಜರಗುತ್ತವೆ. ವಿವಾಹದ ವಿಷಮತೆಯನ್ನು ಅವಲೋಕಿಸಿದರೆ, ಅದರಲ್ಲಿಯು ಮೂರು ರೀತಿಗಳು ನಮಗೆ ಪ್ರಮುಖವಾಗಿ ಕಾಣುವವು.

(೧) ಗಂಡು ಹೆಣ್ಣಿನ ಸ್ವಭಾವಗಳನ್ನಾಗಲಿ ಜಾತಕಾದಿಗಳನ್ನಾಗಲಿ ಚೆನ್ನಾಗಿ ಪರಿಶೀಲಿಸದೆ, 'ಗಂಡಿಗಾಗಿ ಹೆಣ್ಣು' ಎಂದು ಮದುವೆ ಜರುಗಿಸುವದು.

(೨) ಹಣದ ಮದುವೆ :— ಈ ರೀತಿಯ ಮದುವೆಯಲ್ಲಿ ಕನ್ಯಾಪಿತೃಗಳು ವರನ ಹಣವನ್ನೇ ಮುಖ್ಯವಾಗಿ ನೋಡುವರು; ಅಥವಾ ಇಳಿವಯಸ್ಸಿನ ವರನಿಗೆ ಚಿಕ್ಕ ವಯಸ್ಸಿನ ಕನ್ಯೆಯನ್ನು ಬಲವಂತವಾಗಿ ಒಪ್ಪಿಸಿ ಆ ವರನಿಂದ ಹಣವನ್ನು ಪಡೆಯುವರು. ಒಂದು ರೀತಿಯ 'ತೆರವು' ಎಂದು ಹಣವನ್ನು ಸ್ವೀಕರಿಸುವರು;. ಕೆಲವು ಸಲ ಕನ್ಯೆಯ ಕೊರಳಿಗೆ ಮಂಗಳಸೂತ್ರವನ್ನು ಕಟ್ಟಿ ಕಣ್ಣು ಮುಚ್ಚಿದರೆ ಕೃತಕೃತ್ಯರಾಗುವೆವೆಂದು ಬಗೆಯುವ ಮಾತಾಪಿತೃಗಳೂ ಇದ್ದಾರೆ. ಆದರೆ ಕೆಲವು ಸಲ ಮಕ್ಕಳನ್ನು ಕತ್ತಲೆಯ ಕೂಪಕ್ಕೆ ಕೆಡುಹಿ ಕಣ್ಣೆದ್ದವರ ಕಣ್ಣನ್ನು ಕಳೆಯುತ್ತಾರೆ.

(೩) ಪ್ರೇಮವಿವಾಹ ;—ತಾರುಣ್ಯದ ಉಬ್ಬರದಲ್ಲಿ ಮುಂದಿನ ಭವಿಷ್ಯದೆಡೆಗೆ ಯಾವುದೇ ರೀತಿಯ ಲಕ್ಷ್ಯವನ್ನೀಯದೆ. ಸಂಯಮವನ್ನು ಮೀರಿ, 'ಪ್ರೇಮ' ಎಂಬ ಪವಿತ್ರ ಶಬ್ದದ ಅರ್ಥವನ್ನೂ ಕೆಲವು ಸಲ ಕಳೆದು ಮದುವೆಯಾಗುವದು.

ಈ ಮೂರು ರೀತಿಯ ಕಾರಣದಿಂದಲೂ ವಿಷಮವಾಗಿ ಪರಿಣಮಿಸಿದ ವಿವಾಹಗಳು ಕಾಡುಬರುತ್ತವೆ. ಈ ರೀತಿಯಿಂದಾದ ವಿವಾಹಗಳು ಯಾವಾಗಲೂ ಎಲ್ಲವೂ ವಿಷಮವಾಗಿರುತ್ತವೆಯೆಂದು ಇದರ ಅರ್ಥವಲ್ಲ; ಕೆಲವು ಸಲ ಈ ರೀತಿಯ ವಿವಾಹ ಮಾಡಿಕೊಂಡವರು ಸುಖಿಗಳಾಗಿರಲೂಬಹುದು. ಆದರೆ

ಅದು ಕೇವಲ ಆಕಸ್ಮಿಕ, ಅಂತಹರಿಗೆ ಸಹಜವಾದ ದೈವಸಹಾಯವು ಇರುವುದು. ಹಣವನ್ನೇ ಆಗಲಿ, ಕಾಮಪ್ರಧಾನ ಪ್ರೇಮವನ್ನೇ ಆಗಲಿ ಅನು ಸರಿಸಿದ ಮದುವೆಗಳು, ನೂರರಲ್ಲಿ ತೊಂಬತ್ತೊಂಬತ್ತರಷ್ಟು ವಿಫಲವಾಗು ತ್ತವೆಯೆಂಬುದನ್ನು ಜ್ಯೋತಿಷಿಗಳೇಕೆ, ಸಮಾಜದಲ್ಲಿಯ ಹಿರಿಯರೇ ತಮ್ಮ ಅನುಭವದಿಂದ ಹೇಳಬಹುದು. ಬಿಸಿರಕ್ತದ ತರುಣನಿಗೆ ಬ್ರಹ್ಮಚರ್ಯ ಬೇಕು; ಸಂಯಮ ಬೇಕು. ಕುತೂಹಲದ ಭರದಲ್ಲಿ ಮಾಡಿದ ಒಂದು ತಪ್ಪನ್ನು ಮುಚ್ಚಲು ಮುಂದೆ ನೂರಾರು ತಪ್ಪುಗಳನ್ನು ಮಾಡುವ ಪ್ರಸಂಗ ಬರುತ್ತದೆ. ಕೆಲವು ಸಲ ಈ ರೀತಿಯ ವಿವಾಹ ಪ್ರಸಂಗಗಳಲ್ಲಿ ತಾಯಿ–ತಂದೆ, ಬಂಧು–ಬಳಗದವರೊಡನೆ ಸಂಬಂಧವನ್ನು ಕಡಿದುಕೊಳ್ಳುವ ಕೆಟ್ಟ ಪ್ರಸಂಗವೂ ಬರುತ್ತದೆ. ಈ ರೀತಿಯ ವಿಷಮವಿವಾಹದಿಂದ ವಿಷಮ ಪರಿ ಣಾಮಗಳು ಸಮಾಜದಲ್ಲಿ ಕಂಡುಬರುತ್ತವೆ. ಇದರಿಂದ ದಾಂಪತ್ಯ ಜೀವ ನವು ಸುಗಮವಾಗದೆಯೆ, ಬರುವ ಪೀಳಿಗೆಯ ಮೇಲೂ ಇದರ ಪರಿಣಾಮ ವಾಗುತ್ತದೆ.

ಸತಿ ಪತಿಗಳಲ್ಲಿ ವೈಷಮ್ಯ ಬಹಳವಾಗಿದ್ದಾಗ, ದಾಂಪತ್ಯ ಜೀವನದ ಸುಖವು ತಿಲಮಾತ್ರವೂ ಸಿಗದೆ ಇದ್ದಾಗ, ಕೆಲವರು ಸನ್ಯಾಸವನ್ನು ತೆಗೆದು ಕೊಳ್ಳುತ್ತಾರೆ. ಇದೊಂದು ರೀತಿಯ ಪಲಾಯನ ಮನೋವೃತ್ತಿ. ಇನ್ನು ಕೆಲವರು ಅರ್ಧಮರ್ಧ ಸಂಸಾರ ಮಾಡಿ, ಮುಂದೆ ಬೇಸರ ಬರಲು ಕಾಲಿಗೆ ಬುದ್ಧಿ ಹೇಳುತ್ತಾರೆ. ಕೆಲವು ಜನರು ಇದನ್ನೆಲ್ಲ ಕಂಡು ವಿವಾಹದಿಂದ ದೂರ ಇರಲು ಬಯಸಿದರೂ, ಇಂದ್ರಿಯಗಳ ಮೇಲಿನ ಹಿಡಿತವನ್ನು ಕಳೆದುಕೊಂಡು ನೈತಿಕ ಅಧಃಪತನಕ್ಕೀಗಾಗುತ್ತಾರೆ. ಇದರಿಂದ ಸಮಾಜದ ಮೇಲೆಯೇ ಒಂದು ಕೆಟ್ಟ ಪರಿಣಾಮವಾಗುವ ಸಂಭವವಿರುತ್ತದೆ. ಹೀಗೆ ಮದುವೆಯು ವ್ಯಕ್ತಿಗತವಾದ ಪ್ರಶ್ನೆಯಾಗಿದ್ದರೂ, ಮುಂದೆ ಸಮಾಜಕ್ಕೆ ಸಮಾಜ ದಿಂದ ರಾಷ್ಟ್ರಕ್ಕೆ – ಅದರ ಪರಿಣಾಮ ಅಂಟಿಕೊಳ್ಳುತ್ತದೆ. ಯಾವ ದೇಶದಲ್ಲಿ ನೀತಿ, ಅನೀತಿಗಳಲ್ಲಿ ವಿಶೇಷವಾದ ಭೇದವಿರುವದಿಲ್ಲವೋ, ಆ ರಾಷ್ಟ್ರವು ಔದ್ಯೋ ಗಿಕ ದೃಷ್ಟಿಯಿಂದ, ಆರ್ಥಿಕ ದೃಷ್ಟಿಯಿಂದ ಎಷ್ಟು ಮುಂದುವರಿದರೂ ತನ್ನ ಆದರ್ಶವನ್ನು ಕಳೆದುಕೊಳ್ಳುವದು. ನಾವು ಇಂದು ಸರ್ವೋದಯ–ರಾಮ

ರಾಜ್ಯದ ಕನಸನ್ನು ಕಾಣುತ್ತಿದ್ದೇವೆ. ಆದ್ದರಿಂದ ಈ ರೀತಿಯ ವಿಷಮಯವಾದ ವಿವಾಹಗಳನ್ನು ತಡೆಯಲೇಬೇಕು.

ವ್ಯಕ್ತಿಯ ಜೀವನದಲ್ಲಿ ಮೂರು ಮುಖ್ಯವಾದ ಘಟನೆಗಳಿರುತ್ತವೆ: (೧) ಜನ್ಮ. (೨) ವಿವಾಹ. (೩) ಮರಣ ಇವುಗಳಲ್ಲಿ ಜನ್ಮವಾಗಲಿ ಮರಣವಾಗಲಿ ಯಾರ ಸ್ವಾಧೀನದಲ್ಲಿಯೂ ಇರುವುದಿಲ್ಲ. ನಮ್ಮ ಜನ್ಮ ಎಂತಹ ಪರಿಸರದಲ್ಲಿ, ಎಂತಹ ದೇಶದಲ್ಲಿ, ಯಾವ ಕಾಲದಲ್ಲಿ ಆದೀತೆಂಬುದನ್ನು ನಿರ್ದಿಷ್ಟಪಡಿಸಿರುವುದು ನಮ್ಮನ್ನು ಮೀರಿದ ಮಾತು. ಇನ್ನು ಇದರಂತೆಯೇ ಮರಣವು ನಮ್ಮನ್ನು ಮೀರಿದ್ದಿದೆ. ಆದರೆ ಮದುವೆ ಮಾತ್ರ ನಾವು ಪ್ರಜ್ಞೆಯನ್ನು ಪಡೆದಾಗ ನಡೆಯುವುದಲ್ಲದೆ, ನಮ್ಮ ಸ್ವಾಧೀನದಲ್ಲಿರುತ್ತದೆ. ಒಂದು ವಿಶಾಲವಾದ ಅರ್ಥದಲ್ಲಿ ನೋಡಿದಾಗ, ಯಾವುದೂ ನಮ್ಮ ಸ್ವಾಧೀನದಲ್ಲಿರದೆ ದೈವದ ಕೈಯಲ್ಲಿರುತ್ತದೆ; ಆದರೆ ತಿಳಿದೂ ತಿಳಿದೂ ದೋಷ ಮಾಡುವವರು ದೈವದಿಂದ ಹಾಗೆ ವರ್ತಿಸುತ್ತಿದ್ದರೆ, ಉಳಿದವರಾದರೂ ಅದನ್ನು ತಡೆಯಬೇಕಲ್ಲವೇ ? ಮನುಷ್ಯನಿಗೆ ಮನೆಯಲ್ಲಿ ದೊರೆಯುವ ಆನಂದವು ಬಹಳ ಮುಖ್ಯವಾದದ್ದು. ಈ ಆನಂದ ದೊರೆಯದಿದ್ದ ಪಕ್ಷದಲ್ಲಿ ಜೀವಿತದ ಉದ್ದೇಶವೇ ಇಲ್ಲದಂತಾಗುತ್ತದೆ.

ಜ್ಯೋತಿಷ್ಯ ಶಾಸ್ತ್ರವು ಈ ರೀತಿಯ ವಿಷಮದಾಂಪತ್ಯಕ್ಕೆ ಪರಿಹಾರವನ್ನು ಕೊಡುತ್ತ ಬಂದಿದೆ; ಹಾಗೂ ಮುಂದೆ ಕೊಡುವುದು. ಈ ವಿಷಮ ವಿವಾಹಕ್ಕೆ ಕಾರಣರಾರು ? ವಧೂವರರೋ ? ಸಮಾಜವೋ? ತಂದೆ-ತಾಯಿಗಳೋ ? ಯಾರೂ ಅಲ್ಲ, ಅಜ್ಞಾನವೇ ಇದಕ್ಕೆ ಮುಖ್ಯ ಕಾರಣವೆಂದು ಹೇಳಬೇಕಾಗುತ್ತದೆ. 'ಯಥಾ ಬೀಜಂ ತಥಾ ವೃಕ್ಷಂ, ಯಥಾ ವೃಕ್ಷಂ ತಥಾ ಫಲಂ !' ಈ ಅಜ್ಞಾನವು ದೂರವಾಗಬೇಕಾದರೆ ಪ್ರತಿಯೊಬ್ಬ ವಧೂವರರಿಗೆ, ತಂದೆ ತಾಯಿಗಳಿಗೆ ಜ್ಯೋತಿಷ್ಯದ ಜ್ಞಾನವಿರಬೇಕೆಂದು ಇದರರ್ಥವಲ್ಲ. ಇದಲ್ಲದೆ ಜ್ಯೋತಿಷ್ಯದ ಬಗ್ಗೆ ಅಜ್ಞಾನವಾಗಲಿ ಔದಾಸೀನ್ಯವಾಗಲಿ ಇರಲೂ ಕಾರಣವಿಲ್ಲ.

ನಮ್ಮ ಪೂರ್ವಜರು ಇದನ್ನೆಲ್ಲ ಅರಿತು ಈ ವಿವಾಹದ ಸಲುವಾಗಿ ಕೆಲವೊಂದು ನಿಯಮಗಳನ್ನು ಮಾಡಿದ್ದಾರೆ. ಈ ನಿಯಮಗಳ ಪಾಲನೆಯು

ಮದುವೆಗಳನ್ನು ಯಶಸ್ವಿಯಾಗಿಸುವುದಲ್ಲದೆ, ಪ್ರತಿಯೊಬ್ಬನಿಗೂ ಸುಖ ಶಾಂತಿಗಳನ್ನೊದಗಿಸಿಕೊಡಲು ಹವಣಿಸುತ್ತದೆ.

ಹಿಂದಿನ ಕಾಲದಲ್ಲಿ ವಧೂವರರು ಚಿಕ್ಕವರಿದ್ದಾಗಲೇ, ಅವರ ತಾಯಿ ತಂದೆಗಳು ಮದುವೆಯ ಕಾರ್ಯವನ್ನು ನೆರವೇರಿಸುತ್ತಿದ್ದರು. 'ಅಷ್ಟ ವರ್ಷಾ ಭವೇತ್ ಕನ್ಯಾ' ಎಂಬ ಮಾತನ್ನು ಆಗ ಪಾಲಿಸುತ್ತಿದ್ದರು. ಆದುದರಿಂದ, ತಂದೆತಾಯಿಗಳೇ ಜಾತಕಾದಿಗಳ ಪರಿಶೀಲನೆಯನ್ನು ಮಾಡುತ್ತಿದ್ದರು. ಆದರೆ ಇಂದು ವಿವಾಹಗಳು ವಧೂವರರು ಸಾಕಷ್ಟು ಪ್ರಬುದ್ಧರಾದ ಮೇಲೆಯೆ ಜರುಗುತ್ತವೆ. ವರನು ಕನ್ಯೆಯ ರೂಪ-ಶಿಕ್ಷಣಾದಿಗಳನ್ನು ಮುಖ್ಯವಾಗಿ ನೋಡುತ್ತಾನೆ; ಆದರಂತೆ ಕನ್ಯೆಯು ಕೂಡ ತನಗೆ ಬೇಕಾದ ವರನೊಡನೆ ಮದುವೆಯಾಗಲು ಸಾಕಷ್ಟು ಸ್ವಾತಂತ್ರ್ಯ ಪಡೆದಿರುತ್ತಾಳೆ. ಇದು ಒಂದು ರೀತಿಯಿಂದ ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವವೆಂದೂ ಎನ್ನಬಹುದು. ವಿಷಮ ವಿವಾಹವನ್ನು ತಡೆಯಲು ಇಂದು ವಧೂವರರು ತಾತ್ಕಾಲಿಕ ಕಾರಣವಾದ ಪ್ರೇಮವೊಂದನ್ನೇ ಅವಲಂಬಿಸದೆ, ಜ್ಯೋತಿಷ್ಯ ಶಾಸ್ತ್ರದ ಸಲಹೆಯನ್ನು ಪಡೆಯುವದೂ ಅತ್ಯಾವಶ್ಯಕವಾಗಿರುತ್ತದೆ.

ಅನೇಕರು ತಮ್ಮ ಯೌವನಾವಸ್ಥೆಯಲ್ಲಿ ಸಲ್ಲದ ಕೆಲಸಗಳಲ್ಲಿ ತೊಡಗಿದ್ದು, ಕೊನೆಗೆ ಮುಪ್ಪಿನ ಕಾಲದಲ್ಲಿ ಪೋಧಿಸತೊಡಗುತ್ತಾರೆ. ಆದರೆ ಇದರಿಂದ ಯಾವ ಪರಿಣಾಮವೂ ಆಗಲಾರದು. ಆದುದರಿಂದ ತರುಣ-ತರುಣಿಯರೇ ಈ ವಿಷಯದಲ್ಲಿ ಲಕ್ಷ್ಯಪೂರ್ವಕವಾಗಿ ವಿಚಾರಿಸಬೇಕು ಮತ್ತು ಒಮ್ಮೆಲೇ ಯಾವುದಕ್ಕೂ ದುಡುಕಬಾರದು. ಇಲ್ಲಿ ಜ್ಯೋತಿಷ್ಯ ಶಾಸ್ತ್ರವು ಅವರಿಗೆ ತಕ್ಕ ಸಹಾಯವನ್ನು ಮತ್ತು ಯೋಗ್ಯ ಮಾರ್ಗ ದರ್ಶನವನ್ನು ನೀಡಿ ಅವರ ಜೀವನಕ್ಕೆ ಒಂದು ಅರ್ಥವನ್ನು ಕಲ್ಪಿಸಿಕೊಡುವುದರಲ್ಲಿ ಸಂದೇಹವಿಲ್ಲ.

ವಧೂವರರಿಗೆ ಜೀವನದಲ್ಲಿ ನಾಲ್ಕು ವಿಷಯಗಳು ಮುಖ್ಯವಾಗಿರುತ್ತವೆ. (೧) ವಿವಾಹ, (೨) ವೈವಾಹಿಕ ಜೀವನ, (೩) ಸಂತತಿ, (೪) ಸಂತಾನ ಸುಖ– ಇವುಗಳಲ್ಲಿ ಎಲ್ಲದಕ್ಕೂ ವಿವಾಹವೇ ಮುಖ್ಯವಾದುದು ಮತ್ತು ಕಾರಣೀಭೂತವಾದುದು ಇರುತ್ತದೆ. ಆದ್ದರಿಂದ ವಧೂವರರಿಗೆ ಇದರ ಜ್ಞಾನದಿಂದ ತಮ್ಮ ಅಂಧಃಕಾರವು ದೂರವಾಗುವುದೆಂದು ನಂಬಿರುತ್ತೇವೆ.



# ೨. ಗ್ರಹಗಳ ಪರಿಣಾಮ

ಸಮಾಜದಲ್ಲಿಯ ಗಂಡು–ಹೆಣ್ಣುಗಳು ಧನ–ಋಣ ವಿದ್ಯುತ್ತುಗಳಿದ್ದಂತೆ. ಧನ–ಋಣ ವಿದ್ಯುತ್ತುಗಳು ಒಂದನ್ನೊಂದು ಆಕರ್ಷಿಸುತ್ತವೆ ಎಂಬುದು ಎಲ್ಲರಿಗೂ ವಿದಿತವಾದ ಸಂಗತಿ. ಇವೆರಡರ ಸಂಯೋಗದಿಂದ ಒಂದು ಶಕ್ತಿಯು ಉತ್ಪನ್ನವಾಗುತ್ತದೆ; ಇದೇ ಬೆಳಕನ್ನು ಕೊಡಬಲ್ಲದು. ಇದರಂತೆ ಗಂಡು–ಹೆಣ್ಣಿನಲ್ಲಿ ಒಂದು ಪರಸ್ಪರವಾದ ಆಕರ್ಷಣೆಯಿರುತ್ತದೆ. ಇದರಿಂದ ಜಗತ್ತಿಗೆ ಒಂದು ಬಗೆಯ ಪ್ರಕಾಶವೂ ಶಕ್ತಿಯೂ ದೊರೆಯುತ್ತವೆ ಇದನ್ನು ಒಳಗಣ್ಣಿನಿಂದ ಅರಿತ ನಮ್ಮ ಪ್ರಾಚೀನ ಋಷಿಗಳು, ಹೆಣ್ಣನ್ನು ಸೋಮಶಕ್ತಿಯೆಂದೂ ಗಂಡನ್ನು ಅಗ್ನಿಶಕ್ತಿಯೆಂದೂ ಬಣ್ಣಿಸಿದ್ದಾರೆ.

ಹಾಗಾದರೆ ಪ್ರತಿಯೊಂದು ಹೆಣ್ಣು–ಗಂಡುಗಳ ಸಂಯೋಗವು ಈ ರೀತಿಯ ಬೆಳಕನ್ನೇಕೆ ಕೊಡುವುದಿಲ್ಲ ? ಇದಕ್ಕೆ ಈ ಗಂಡು–ಹೆಣ್ಣಿನ ಸಂಯೋಗದ ವಿಷಮತೆಯು ಕಾರಣವಾಗಿರುತ್ತದೆ. ಇದೇ ವಿಷಮ ವಿವಾಹಕ್ಕೆ ಕಾರಣವಾಗಿರುತ್ತದೆ.

ಬಹುತರವಾಗಿ ವಿವಾಹ ಪೂರ್ವದಲ್ಲಿ ಜನರು ನೋಡುವ ವಿಷಯಗಳೆಂದರೆ ವರನ ಮನೆತನ, ಸಂಪತ್ತು, ಉದ್ಯೋಗ, ಕುಲಗೋತ್ರ ಮುಂತಾದ ಗಬಾಹ್ಯ ವಿಷಯಗಳು. ಇವುಗಳಿಂದಲೇ ತೃಪ್ತರಾಗಿ ವಿವಾಹವನ್ನು ಸಾಂಗಗೊಳಿಸುತ್ತಾರೆ. ಆದರೆ ವಿವಾಹದ ತರುವಾಯ ಸತಿಪತಿಯರಲ್ಲಿ ವೈಮನಸ್ಸು. ಉಂಟಾಗಿ ಅನಿಷ್ಟಗಳು ಸಂಭವಿಸುತ್ತವೆ. ತಾವು ಬಯಸಿದ ಸುಖ ಸಿಗದೆ ಒಂದು ಅತೃಪ್ತಿಯ ವಾತಾವರಣ ಉಂಟಾಗುತ್ತದೆ.

ಒಬ್ಬ ವ್ಯಕ್ತಿಯ ಬಾಹ್ಯಜೀವನವನ್ನು ಅರಿತಷ್ಟೇ ಸುಲಭವಾಗಿ ಅಂತರಂಗವನ್ನು ನಾವು ಅರಿಯಲಾರೆವು. ಇದನ್ನು ತಿಳಿಯುವುದು ಕೇವಲ ಯೋಗಿಗಳಿಗೆ ಮಾತ್ರ ಸಾಧ್ಯ. ಆದರೆ ನಮ್ಮಲ್ಲಿ ಎಲ್ಲರೂ ಯೋಗಿಗಳಿರುವದಿಲ್ಲ. ಶಾಸ್ತ್ರಸಂಪನ್ನನಾದ ಜ್ಯೋತಿಷಿಯೂ ಇದನ್ನರಿಯಬಲ್ಲ. ವಿವಾಹದಂತಹ ಮಹತ್ವದ ಕಾರ್ಯದಲ್ಲಿ ಅವನ ಸಲಹೆಯು ಅತ್ಯಾವಶ್ಯಕವಾದುದು. ಗಂಡು–ಹೆಣ್ಣಿನ ಯೋಗ್ಯ ಜೋಡಿಗಳನ್ನು ಅವನು ಕೂಡಿಸಿಕೊಡಬಲ್ಲ ಸಮರ್ಥ

ಪುರುಷನಾದುದರಿಂದ, ವಧೂವರರ ಉತ್ತರಜೀವನದ ಭವಿಷ್ಯತ್ತಿನ ನಿರ್ಮಾಣ ಕಾರ್ಯದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಾನೆ. ಉದಾ.-ವೃಶ್ಚಿಕ ಮತ್ತು ಮಕರ ರಾಶಿಗಳಲ್ಲಿ ಮಂಗಳನಿದ್ದ ಪುರುಷನು ಹಟವಾದಿ, ಜಿಡಿ ಯಾಗಿರುತ್ತಾನೆಂಬುದು ಸಾಧಾರಣವಾಗಿ ಎಲ್ಲ ಜ್ಯೋತಿಷಿಗಳಿಗೆ ಗೊತ್ತಿರು ತ್ತದೆ. ಇಂತಹ ಪುರುಷನ ಬಾಹ್ಯಸ್ಥಿತಿಯನ್ನೇ ನೋಡಿ ಕನ್ಯೆಯನ್ನು ಕೊಟ್ಟರೆ ಅವಳ ಜೀವನ ಸುಖಮಯವಾಗಿರುವುದು ಹೇಗೆ ಸಾಧ್ಯ? ಆದರೆ ಇಂಥಹನಿಗೆ ಸಪ್ತಮಸ್ಥಾನದಲ್ಲಿ ಕರ್ಕದ ಗುರು ಅಥವಾ ಮೀನದ ಶುಕ್ರ ಇದ್ದ ಕನ್ಯೆಯನ್ನು ಕೊಟ್ಟರೆ ಅವಳ ಮೇಲೆ ಅವನ ಸ್ವಭಾವದ ದುಷ್ಪರಿಣಾಮವಾಗದೆ ಸುಗಮವಾದ ಜೀವನ ಸಾಗುವುದು.

ರಾಶಿಗಳಲ್ಲಿ ಕೆಲವು ರಾಶಿಗಳು ಒಂದಕ್ಕೊಂದು ಮಿತ್ರ ರಾಶಿಗಳಿರುತ್ತವೆ. ಕೆಲವು ಸಮರಾಶಿಗಳು, ಇನ್ನು ಕೆಲವು ಶತ್ರುರಾಶಿಗಳಿರುತ್ತವೆ. ಇದಲ್ಲದೆ ಅವುಗಳ ತತ್ವಗಳೂ ಬೇರೆ ಬೇರೆ ಯಾಗಿರುತ್ತವೆ. ಅಗ್ನಿತತ್ವ, ಭೂತತ್ವ, ವಾಯುತತ್ವ, ಜಲತತ್ವ, ಇತ್ಯಾದಿ. ಅಲ್ಲದೆ ಗ್ರಹಗಳ ಕಾರಕತ್ವವೂ, ಭಿನ್ನವಾಗಿರುತ್ತದೆ. ಉದಾ;-ರವಿ-ಆತ್ಮ, ಚಂದ್ರ-ಮನಸ್ಸು, ಕುಜ-ಸತ್ವ, ಬುಧ-ಬುದ್ಧಿ, ಗುರು-ಚೈತನ್ಯ, ಶುಕ್ರ-ಪ್ರೇಮ, ಶನಿ-ದಾರುಣ, ರಾಹು ಕೇತು-ಶೋಕ. ಈ ಕಾರಕತ್ವಕ್ಕೆ ಅನುಗುಣವಾಗಿ ಗ್ರಹಗಳ ಸ್ವಭಾವದಂತೆ ಮನುಷ್ಯನ ಸ್ವಭಾವವಿರುತ್ತದೆ. ಇದೆಲ್ಲವೂ ದೈವೀಕ್ರಿಯೆ ಯಾಗಿದ್ದರೂ ಇದನ್ನು ಜ್ಯೋತಿಷ್ಯ ಶಾಸ್ತ್ರವು ತಿಳಿಯಪಡಿಸುತ್ತದೆ. ಈ ವಿಷಯವನ್ನು ಅರಿತ ಬಳಿಕ ಸ್ವಭಾವಕ್ಕೆ ತಕ್ಕ ವಧುವರರನ್ನು ಹೊಂದಿಸು ವುದು ವಿಹಿತ.

ಈ ಜಗತ್ತಿನಲ್ಲಿ ಒಂದು ನಿಯಮವಿದ್ದಂತೆ ಕಂಡುಬರುತ್ತದೆ. ಸೂರ್ಯೋದಯ, ಋತುಮಾನ, ಬೆಳವಣಿಗೆ ಇವೆಲ್ಲವುಗಳಲ್ಲಿ ಒಂದು ನೈಸ ರ್ಗಿಕ ಸತ್ಯವಿದೆ. ನಿಸರ್ಗದ ಮೇಲೆ ಸೂರ್ಯ, ಚಂದ್ರ, ಗ್ರಹಗಳ ಪರಿ ಣಾಮ ಬಹಳವಾಗಿದೆ. ಸೂರ್ಯನಿಂದ ಋತುಮಾನವಾಗುತ್ತದೆ, ; ನಿಂದ ಜೀವರಾಶಿ ಬದುಕುತ್ತದೆ. ಚಂದ್ರ ವನಸ್ಪತಿ ರಾಜನಾಗಿದ್ದಾನೆ. ಅವನ ಕಿರಣಗಳಿಂದ ಔಷಧಿಗಳು ಸತ್ವ ಪಡೆಯುತ್ತವೆ. ಇದರಂತೆ ಗ್ರಹಗಳ ಪರಿಣಾಮವೂ ನಿಸರ್ಗದ ಮೇಲೆ ಆಗಿದೆ. ಮಾನವನು ಎಷ್ಟು ಮುಂದು

ವರಿದರೂ ಅವನು ನಿಸರ್ಗದ ಕೂಸಾಗಿದ್ದಾನೆ. ಅವನು ಈ ಪರಿಣಾಮದಿಂದ ದೂರವಿರಲಾರ. ಅವನ ಮನಸ್ಸು, ದೇಹ ಬುದ್ಧಿ, ಹೃದಯಗಳ ಮೇಲೆ ಗ್ರಹಗಳು ಸಾಕಷ್ಟು ಪರಿಣಾಮ ಬೀರಿದ್ದನ್ನೂ ನಾವು ಕಾಣುತ್ತೇವೆ.

ಸೂರ್ಯ–ಚಂದ್ರರ ಯುತಿಯ ದಿವಸ ಎಂದರೆ ಅಮಾವಾಸ್ಯೆಯ ದಿನ. ಮಲರೋಗವಿದ್ದವರಿಗೆ ಮಲರೋಗವು ಹೆಚ್ಚಾಗುವುದನ್ನು ಕಾಣುತ್ತೇವೆ. ಸೂರ್ಯ–ಎಂದರೆ ಆತ್ಮ; ಚಂದ್ರಎಂದರೆ ಮನಸ್ಸು. ಇವೆರಡರ ಯುತಿ ಮನುಷ್ಯನ ಮೇಲೆ ಪರಿಣಾಮವನ್ನುಂಟುಮಾಡುತ್ತದೆ.

ಹುಣ್ಣಿಮೆಯ ದಿನ ಸಾಗರವು ಉಕ್ಕೇರುತ್ತದೆ. ಇದಕ್ಕೆ ಚಂದ್ರಗ್ರಹದ ಆಕರ್ಷಣವೇ ಮುಖ್ಯ ಕಾರಣ. ಇದೊಂದು ನಾವು ಕಣ್ಣೆದುರಿಗೇ ಕಾಣುವ ಉದಾಹರಣೆಯಾಗಿದೆ.

ಭಾರತೀಯರು ಒಂದು ಉಜ್ವಲವಾದ ಸಂಪ್ರದಾಯದಲ್ಲಿ ಬೆಳೆದು ಬಂದವರು. ಇದು ಕೆಲವೆಡೆ, ಅಂಧಶ್ರದ್ಧೆಗಳ ಕಾರಣದಿಂದ ಮೂಢ ನಂಬುಗೆಯಾಗಿ ಪರಿವರ್ತಿಸಿದೆ. ಆದರೆ ಈ ಸಂಪ್ರದಾಯದ ಹಿಂದೆ ಒಂದು ಶಾಸ್ತ್ರವಿದೆ. ಇದನ್ನೇ ಒಳಹೊಕ್ಕು ನೋಡಿದಾಗ ಅದೂ ಒಂದು ವಿಜ್ಞಾನದ ಸತ್ಯವನ್ನೇ ತೋರಿಸುತ್ತದೆ. ಭಾರತೀಯರ ಭೌತಿಕ ಹಾಗೂ ಆಧ್ಯಾತ್ಮಿಕ ಜೀವಗಳು ಒಂದೇ ನಾಣ್ಯದ ಎರಡು ಮುಖಗಳಂತೆ ಅಭೇಧವಾಗಿವೆ. ಈ ಕಾರಣದಿಂದ ನಮ್ಮ ಸಂಪ್ರದಾಯಗಳಲ್ಲಿದ್ದ ಸತ್ಯಾಂಶವನ್ನು ಗುರುತಿಸಿ ಜೀವನದ ಸರ್ವತೋಮುಖ ಏಳ್ಗೆಯಾಗಲು ಅವನ್ನು ಅನುಸರಿಸಬೇಕು.

# ೩. ದೈವದೊಡನೆ ಮೋಸದಾಟವೇ ?

ವಿವಾಹದಂತಹ ಮಹತ್ವದ ವಿಷಯದಲ್ಲಿ ಲಕ್ಷ್ಯದಲ್ಲಿಡಬೇಕಾದ ಇನ್ನೊಂದು ಸಂಗತಿಯಿದೆ; ಇದು ವಧು—ವರರಿಗಿಂತಲೂ ಹೆಚ್ಚಾಗಿ ಮಾತಾಪಿತೃಗಳಿಗೆ ಸಂಬಂಧಿಸಿದ್ದು. ತಮ್ಮ ಮಕ್ಕಳ ಮದುವೆಯಾಗಬೇಕೆಂಬ ಆತುರದ ಭರದಲ್ಲಿ, ಅವರು ಜಾತಕಾದಿಗಳನ್ನು ತಿದ್ದುವ ಕೆಲಸಕ್ಕೆ ಪ್ರೋತ್ಸಾಹವನ್ನೀಯುತ್ತಾರೆ. ಇದರಿಂದ ತಾತ್ಕಾಲಿಕವಾದ ಯಶಸ್ಸು ಉಂಟಾದಂತೆ ಕಂಡುಬಂದರೂ, ಮುಂದೆ ಭೋಗಿಸುವವರು ವಧೂವರರೇ ! ವ್ಯಾಪಾರಸ್ಥರ ಮೇಲೆ ಕರ ಹೇರಿದರೂ ಭೋಗಿಸುವವರು ಗ್ರಾಹಕರೇ ಆಗುವಂತೆ, ವಧೂವರರೇ ಜಾಗ್ರತೆ ತೆಗೆದುಕೊಳ್ಳುವುದು ಅವಶ್ಯ.

ಮದುವೆಯ ಕಾರ್ಯವು ಒಂದು ಸಾಮಾನ್ಯ ಉದ್ಯೋಗವಲ್ಲ. ಒಂದು ಗಂಡಿಗೆ ಒಂದು ಹೆಣ್ಣನ್ನು ಒಂದು ಹೆಣ್ಣಿಗೆ ಒಂದು ಗಂಡನ್ನು ಜೋಡಿಸುವುದಷ್ಟೇ ಅದರ ಧ್ಯೇಯವಲ್ಲ. ಹೇಗಾದರೂ ಮಾಡಿ ಮದುವೆ ಜೋಡಿಸಲು ಜಾತಕ ತಿದ್ದುವ ಕಾರ್ಯವನ್ನು ಕೆಲವರು ಕೈಕೊಳ್ಳುತ್ತಾರೆ. ಕೇವಲ ಜಾತಕವನ್ನು ತಿದ್ದುವುದರಿಂದ ಅವರು ವಧೂವರರ ಭವಿಷ್ಯವನ್ನು ತಿದ್ದಲಾರರು. ಇದರ ಫಲಸ್ವರೂಪಿಯಾಗಿ ವಿಷಮ ವಿವಾಹಗಳು ಬಳಕೆಯಲ್ಲಿ ಬರುವವು. ಏನೇ ಆಗಲಿ, ತಿಳಿದೂ ತಿಳಿದೂ ಕುಂಡಲಿಯಲ್ಲಿಯ ಗ್ರಹಗಳನ್ನು ಸ್ಥಾನಾಂತರಗೊಳಿಸುವುದು, ಕುಂಡಲಿಯಲ್ಲಿಯ ಲಗ್ನವನ್ನು ಬದಲಿಸುವುದು ಅಕ್ಷಮ್ಯವಾದ ಅಪರಾಧವಾಗಿದೆ. ಹೀಗೆ ಮಾಡುವವರು ಕ್ಷಣಿಕ ಲಾಭವನ್ನು ಪಡೆಯುತ್ತಾರೆ; ಎಂದರೆ ದಕ್ಷಿಣೆ–ಭೋಜನಾದಿಗಳನ್ನು ಪಡೆಯುವರು; ಆದರೆ ಇದರ ಪರಿಣಾಮ ವಿಪರೀತವಾಗಿರುವುದೆಂಬುದನ್ನು ಲಕ್ಷ್ಯದಲ್ಲಿಡಬೇಕು. ಇವರು ಒಂದು ಶಾಸ್ತ್ರದ ಕೊಲೆಯನ್ನು ಮಾಡುವದಲ್ಲದೆ, ವಿಷಮ ವಿವಾಹದ ಜೋಡಿಗಳಿಗೆ ಕಾರಣರಾಗುವರು.

'ನೂರು ಸುಳ್ಳು ಹೇಳಿಯಾದರೂ ಒಂದು ಕಲ್ಯಾಣ ಕಟ್ಟಬೇಕು' ಎಂದರೆ ಒಂದು ಮದುವೆಯನ್ನು ನೆರವೇರಿಸಬೇಕೆಂಬ ಗಾದೆಯಿದೆ; ಆದರೆ ಈ

ನಾಣ್ಣುಡಿಯಲ್ಲಿ, ಜಾತಕವನ್ನು (ಕುಂಡಲಿಯನ್ನು) ತಿದ್ದಿ ವಿಷಮವಿವಾಹ ಮಾಡಬೇಕೆಂಬ ಅಭಿಪ್ರಾಯವಲ್ಲ. ಜಾತಕವನ್ನು ತಿದ್ದಿದರೆ ಭವಿಷ್ಯವನ್ನು ತಿದ್ದಿದಂತಾಗುವುದಿಲ್ಲವೆಂಬ ಮಾತನ್ನು ಮತ್ತೊಮ್ಮೆ ಹೇಳಬೇಕಾಗುವುದು. ಹೀಗೆ ಮಾಡುವವರು ಯಾರೆಂಬುದನ್ನು ವಾಚಕರು ಊಹಿಸಿರಲಿಕ್ಕೆ ಸಾಕು.

ತಮ್ಮ ಮಗಳು ಒಳ್ಳೆಯ ಮನೆಯನ್ನು ಪಡೆಯಬೇಕು ಎಂಬ ಅಭಿಲಾಷೆ ಕನ್ಯೆಯ ಮಾತಾ-ಪಿತೃಗಳಿಗೆ ಅತಿಶಯವಾಗಿರುತ್ತದೆ, ಇದು ಸ್ವಾಭಾವಿಕವೂ ಆಹುದು. ಈ ಅಭಿಲಾಷೆಯ ಭರದಲ್ಲಿ ಇವರೇ ಹೆಚ್ಚಾಗಿ ಜಾತಕವನ್ನು ತಿದ್ದಲು ಪ್ರೋತ್ಸಾಹವನ್ನು ಕೊಡುತ್ತಾರೆ. ಕೇವಲ ವರನ ಐಶ್ವರ್ಯ, ಮನೆತನ, ಶಿಕ್ಷಣಾದಿಗಳಿಗೆ ಮರುಳಾಗಿ. ಈ ಕಾರ್ಯದಲ್ಲಿ ಆಸಕ್ತರಾಗುತ್ತಾರೆ. ಆದರೆ ಬಹುಶಃ ಇಂತಹ ಎಲ್ಲ ವಿವಾಹಗಳು ಅಸಫಲವಾದುದನ್ನು ಸಮಾಜದಲ್ಲಿ ನಾವು ಇಂದು ಕಣ್ಣಾರೆ ಕಾಣುತ್ತೇವೆ.

ಜಾತಕವನ್ನು ಹೇಗೆ ಹಾಗು ಎಲ್ಲಿ ತಿದ್ದುವರೆಂಬುದನ್ನು ಸ್ವಲ್ಪದರಲ್ಲಿ ನೋಡುವಾ ;

(೧) ಯಾವ ವಿವಾಹವನ್ನು ಏಕನಾಡಿಯ ಮೂಲಕ ಮುರಿಯುವ ಪ್ರಸಂಗ ಬರುವುದೊ, ಅಲ್ಲಿ ನಾಡಿಯನ್ನೇ ಬದಲಿಸುವರು.

(೨) ಎಲ್ಲಿ ಕುಜದೋಷವಿದೆಯೆಂದು ಹೇಳುವರೋ ಅಲ್ಲಿ ಕುಜನ (ಮಂಗಳ) ಸ್ಥಾನವನ್ನೇ ಬದಲಿಸುವರು.

(೩) ಎಲ್ಲಿ ಮನುಷ್ಯ-ರಾಕ್ಷಸ ಗಣವೆಂದು ವಿವಾಹ ವರ್ಜ್ಯವಿರುವುದೊ ಅಲ್ಲಿ ನಕ್ಷತ್ರವನ್ನೇ ಬದಲಿಸುವರು.

(೪) ವಯಸ್ಸು ಕಡಿಮೆ ಮಾಡಲು ಸಂವತ್ಸರ ಬದಲಿಸುವರು.

ಈ ರೀತಿಯಾಗಿ ಜಾತಕವನ್ನು ಬದಲಿಸಿ ವಿವಾಹವನ್ನು ಸಾಂಗಗೊಳಿಸುವುದು, ಕಪಟವೇಷವನ್ನು ಧರಿಸಿ ಚೌರ್ಯವನ್ನು ಮಾಡಿದಂತೆ ಆಗುವುದು. ಆದರೆ ಆ ಕಪಟವೇಷ ಕೊನೆಯವರೆಗೆ ಉಳಿಯದೆಂದು ಅವರಿಗೆ ತಿಳಿಯದು. ವಿಧಿಯೆಂಬ ಗುಪ್ತಪೋಲೀಸನು ಇವರ ಹಿಂದೆಯೇ ನೆರಳಿನಂತಿರುವನು.

ಜ್ಯೋತಿಷ್ಯವು ಇದೊಂದು ಶಾಸ್ತ್ರವೆಂಬುದನ್ನು ಮರೆಯಬಾರದು. ವಿದ್ಯುತ್ ಪ್ರವಾಹವನ್ನು ನಾವು ಎಷ್ಟು ಪ್ರೀತಿಯಿಂದ ಮುಟ್ಟಿದರೂ ಅದು ನಮಗೆ ಚೇಳಿನಂತೆ ಕಡಿಯುವುದೇ. ಅದರಂತೆ ಜ್ಯೋತಿಷ್ಯದಲ್ಲಿ ಮಾಡಿದ

ತಪ್ಪಿಗಾಗಿ ತಕ್ಕ ಫಲವನ್ನೂ ಅನುಭವಿಸಬೇಕಾಗುವುದು. ಆದ್ದರಿಂದ ಎರಡು ಜಾತಕಗಳನ್ನು ಹೋಲಿಸುವಾಗ, ಅಲ್ಲಿದ್ದ ಸಂಗತಿಗಳನ್ನು ಸ್ಪಷ್ಟವಾಗಿ ಹೇಳಬೇಕು. ಒಂದು ವೇಳೆ ಕೂಡಿ ಬಾರದಿದ್ದರೆ 'ಬರುವುದಿಲ್ಲ' ಎಂದು ಹೇಳಿ ಶಾಸ್ತ್ರದ ಮಾನವನ್ನು ಕಾಯಬೇಕೇ ಹೊರತು ಸ್ವಲ್ಪ ಹೆಚ್ಚು ಕಡಿಮೆ ಮಾಡಿ, ವ್ಯಾಪಾರಿಗಳಂತೆ ಹೊಂದಿಸಲು ಹೋಗಬಾರದು. 'ನಿಸ್ಪೃಹಸ್ಯ ತೃಣಂ ಜಗತ್' ಎಂಬ ಮಾತನ್ನು ಯಾವಾಗಲೂ ಲಕ್ಷ್ಯದಲ್ಲಿಡಬೇಕು. ಜ್ಯೋತಿಷಿಯು ಒಬ್ಬ ನ್ಯಾಯಾಧೀಶನಿದ್ದಂತೆ; ಅವನ ಮಾನದಂಡಗಳು— ಅಳತೆಗೋಲುಗಳು ಸಂಕುಚಿತವಾಗಬಾರದು. ಅವನು ಲೋಭದ ಮೂಲಕ ಅಸತ್ಯವನ್ನು ಪ್ರತಿಪಾದಿಸಬಾರದು.

ಜಾತಕಾದಿಗಳನ್ನು ತಿದ್ದುವದೋಷದಂತೆ, ಜಾತಕಾದಿಗಳನ್ನು ನೋಡದಿರುವುದೂ ದೋಷಯುಕ್ತವಾಗಿದೆ. ಎರಡನೆಯ ಸಂಬಂಧವಿದ್ದಾಗ ಜಾತಕವನ್ನು ಪರಿಶೀಲಿಸುವುದಿಲ್ಲ. ಇದನ್ನು ವಿರೋಧಿಸಿದರೆ, ಎರಡನೆಯ ಸಂಬಂಧಕ್ಕೆ ಏನೂ ವಿಚಾರಿಸಬಾರದೆಂಬ ತಮ್ಮದೇ ಆದ ಒಂದು ಧರ್ಮ ಸೂತ್ರವನ್ನು ಹೇಳುತ್ತಾರೆ. ಎರಡನೆಯ ಸಂಬಂಧವಾದರೇನು. ಅದೇನು ವಿವಾಹವಲ್ಲವೇ ? ಇದನ್ನು ಗೊಂಬೆಯ ಮದುವೆಯಂತೆ ಮಾಡುವುದರಿಂದ ಅವರ ಜೀವನ ವಿಷಮತೆಗೆ ಕಾರಣರಾಗುತ್ತಾರೆ, ಹೀಗೆ ಜಾತಕಾದಿಗಳನ್ನು ಪರಿಶೀಲಿಸದಿರುವ ಎರಡನೆಯ ಸಂಬಂಧದ ಬಹಳ ಜೋಡಿಗಳು ಅಸುಖಿ ಅತೃಪ್ತರಾದುದನ್ನು ನಾವಿಂದು ಕಾಣುತ್ತೇವೆ.

ಆದ್ದರಿಂದ ಜಾತಕವನ್ನು ತಿದ್ದುವುದಾಗಲಿ, ಅಥವಾ ಅದನ್ನು ನೋಡದೆಯೇ ಮದುವೆ ಮಾಡುವುದಾಗಲೀ ವಿಷಮ ವಿವಾಹಕ್ಕೆ ಕಾರಣವಾಗಿದ್ದು; ಸಮಾಜದಲ್ಲಿಯ ಸುಖ-ಶಾಂತಿಗಳನ್ನು ಅಪಹರಿಸುತ್ತದೆ ಎಂದು ಹೇಳಲು ಯಾವ ಅಭ್ಯಂತರವೂ ಇಲ್ಲ.

---

# ೪. ರಾಶಿ-ನಕ್ಷತ್ರಗಳು

## ನಕ್ಷತ್ರಗಳು

ಚಂದ್ರನಿಂದ ೧೩ ಅಂಶ ೨೦ ಕಲೆ ಆಗುವ ಸಮಯಕ್ಕೆ ನಿತ್ಯ ನಕ್ಷತ್ರ ವೆನ್ನುವರು.

೧. ಅಶ್ವಿನಿ, ೨. ಭರಣಿ, ೩. ಕೃತ್ತಿಕಾ, ೪. ರೋಹಿಣಿ ೫. ಮೃಗಶಿರಾ, ೬. ಆರಿದ್ರಾ, ೭. ಪುನರ್ವಸು, ೮. ಪುಷ್ಯ, ೯. ಆಶ್ಲೇಷಾ, ೧೦. ಮಘಾ, ೧೧. ಪೂರ್ವಾ, ೧೨. ಉತ್ತರಾ. ೧೩, ಹಸ್ತಾ. ೧೪. ಚಿತ್ರಾ, ೧೫. ಸ್ವಾತಿ, ೧೬. ವಿಶಾಖಾ, ೧೭. ಅನುರಾಧಾ ೧೮. ಜ್ಯೇಷ್ಠಾ. ೧೯. ಮೂಲಾ, ೨೦. ಪೂರ್ವಾಷಾಢಾ, ೨೧. ಉತ್ತರಾಷಾಢಾ, ೨೨. ಶ್ರವಣಾ, ೨೩, ಧನಿಷ್ಠಾ, ೨೪. ಶತತಾರಾ, ೨೫ ಪೂರ್ವಾಭಾದ್ರಪದಾ, ೦೬. ಉತ್ತರಭಾದ್ರಪದಾ, ೨೭. ರೇವತಿ. ಹೀಗೆ ೨೭ ನಕ್ಷತ್ರಗಳಿವೆ.

## ರಾಶಿ

ಅಶ್ವಿನ್ಯಾದಿ $೨\frac{೧}{೪}$ ನಕ್ಷತ್ರವೆಂದರೆ ಒಂದು ರಾಶಿ. ಇದೇ ರೀತಿಯಾಗಿ ೨೭ ನಕ್ಷತ್ರಗಳಲ್ಲಿ ೧೨ ರಾಶಿಗಳಿವೆ. ಪ್ರತಿಯೊಂದು ನಕ್ಷತ್ರಕ್ಕೆ ೪ ಚರಣ; ಹೀಗೆ ೨೭ ನಕ್ಷತ್ರಕ್ಕೆ ೧೦೮ ಚರಣಗಳು. ೧೨ ರಾಶಿಗಳು ಇದ್ದ ಮೂಲಕ ಪ್ರತಿಯೊಂದು ರಾಶಿಗೆ ೯ ಚರಣಗಳು.

೧. ಮೇಷ, ೨. ವೃಷಭ, ೩. ಮಿಥುನ, ೪. ಕರ್ಕ. ೫. ಸಿಂಹ, ೬. ಕನ್ಯಾ, ೭. ತುಲಾ, ೮. ವೃಶ್ಚಿಕ, ೯. ಧನು. ೧೦. ಮಕರ ೧೧. ಕುಂಭ, ೧೨. ಮೀನ. ಹೀಗೆ ಹೀಗೆ ಹನ್ನೆರಡು ರಾಶಿಗಳಿಗೆ, ರಾಶಿ, ಕ್ಷೇತ್ರ, ಗೃಹ, ಭವನ ಮತ್ತು ರುಕ್ಷ ಎಂಬ ನಾಮರೂಪಗಳು.

## ರಾಶಿಯೆಂದರೇನು ?

ಒಂದೊಂದು ನಕ್ಷತ್ರಕ್ಕೆ ನಾಲ್ಕು ನಾಲ್ಕು ಚರಣಗಳು (ಪಾದಗಳು); ಹೀಗೆ ಎರಡೂಕಾಲು ನಕ್ಷತ್ರ ಅರ್ಥಾತ್ ೯ ಚರಣ ಕೂಡಿದರೆ ಒಂದು ರಾಶಿ,

ಯಾಗುತ್ತದೆ. ಹೇಗೆ ೨೭ ನಕ್ಷತ್ರಗಳಿಗೆ ೧೨ ರಾಶಿ ಆಗಿವೆ. ಅವುಗಳ ವಿವರ ಕೆಳಗೆಕೊಟ್ಟಿದೆ :

(೧) ಅಶ್ವಿನಿಯು ನಾಲ್ಕು ಚರಣ, ಭರಣಿಯು ನಾಲ್ಕು ಚರಣ ಮತ್ತು ಕೃತ್ತಿಕೆಯ ಒಂದನೆಯ ಚರಣ ಇವುಗಳಿಗೆ ಮೇಷರಾಶಿಯೆನ್ನುತ್ತಾರೆ.

(೨) ಕೃತ್ತಿಕೆಯ ಕೊನೆಯ ೩ ಚರಣ, ರೋಹಿಣಿ ಪೂರ್ಣ ಮತ್ತು ಮೃಗಶಿರಾದ ಮೊದಲನೆಯ ೨ ಚರಣಗಳಿಗೆ ವೃಷಭರಾಶಿಯೆನ್ನುತ್ತಾರೆ.

(೩) ಮೃಗಶಿರಾದ ಕೊನೆಯ ೨ ಚರಣ (೩ ನೇ, ೪ ನೇ ) ಆರಿದ್ರಾ ಪೂರ್ಣ ಮತ್ತು ಪುನರ್ವಸುವಿನ ಮೊದಲನೆಯ ಮೂರು ಚರಣಗಳಿಗೆ ಮಿಥುನ ರಾಶಿಯೆನ್ನುತ್ತಾರೆ.

(೪) ಪುನರ್ವಸುವಿನ ಕೊನೆಯ ಚರಣ, ಪುಷ್ಯಾ ಹಾಗೂ ಆಶ್ಲೇಷಾ ಇವುಗಳಿಗೆ ಕರ್ಕರಾಶಿಯೆನ್ನುತ್ತಾರೆ.

(೫) ಮಘಾ, ಪೂರ್ವಾ (ಹುಬ್ಬಾ) ಪೂರ್ಣ, ಹಾಗೂ ಉತ್ತರೆಯ ಮೊದಲ ಚರಣಕ್ಕೆ ಸಿಂಹಾರಾಶಿಯೆನ್ನುತ್ತಾರೆ.

(೬) ಉತ್ತರೆಯ ಕೊನೆಯ ೩ ಚರಣ, ಹಸ್ತಾ ಪೂರ್ಣ ಹಾಗೂ ಚಿತ್ರಾದ ಮೊದಲನೆಯ ೨ ಚರಣಗಳಿಗೆ ಕನ್ಯಾರಾಶಿಯೆನ್ನುತ್ತಾರೆ.

(೭) ಚಿತ್ರಾದ ಕೊನೆಯ ೨ ಚರಣ. ಸ್ವಾತೀ ಪೂರ್ಣ, ವಿಶಾಖೆಯ ಮೊದಲನೆಯ ೩ ಚರಣಗಳಿಗೆ ತುಲಾರಾಶಿಯೆನ್ನುತ್ತಾರೆ.

(೮) ವಿಶಾಖೆಯ ಕೊನೆಯ ಒಂದು ಚರಣ, ಅನುರಾಧಾ ಹಾಗೂ ಜ್ಯೇಷ್ಠಾ ಪೂರ್ಣ ಇವುಗಳಿಗೆ ವೃಶ್ಚಿಕರಾಶಿಯೆನ್ನುತ್ತಾರೆ.

(೯) ಮೂಲಾ ಹಾಗೂ ಪೂರ್ವಾಷಾಢಾ ಪೂರ್ಣ ೪ ಚರಣ ಮತ್ತೂ ಉತ್ತರಾಷಾಢಾದ ಮೊದಲನೆಯ ಚರಣ ಮಾತ್ರ ಇವುಗಳಿಗೆ ಧನುರಾಶಿ ಯೆನ್ನುತ್ತಾರೆ.

(೧೦) ಉತ್ತರಾಷಾಢಾದ ಕೊನೆಯ ೩ ಚರಣಗಳು, ಶ್ರವಣಾ ಪೂರ್ಣ ಹಾಗೂ ಧನಿಷ್ಠಾ ಮೊದಲನೆಯ ೨ ಚರಣಗಳಿಗೆ ಮಕರರಾಶಿಯೆನ್ನುತ್ತಾರೆ.

(೧೧) ಧನಿಷ್ಠಾದ ಕೊನೆಯ ೨ ಚರಣ ಶತತಾರಕಾ ಪೂರ್ಣ ಹಾಗೂ ಪೂರ್ವಭಾದ್ರಪದದ ಮೊದಲಿನ ೩ ಚರಣ ಇವುಗಳಿಗೆ ಕುಂಭರಾಶಿಯೆನ್ನುತ್ತಾರೆ.

(೧೨) ಪೂರ್ವಾಭಾದ್ರಪದದ ಕೊನೆಯ ಒಂದು ಚರಣ ಹಾಗೂ ಉತ್ತರಾ ಭಾದ್ರಪದಾ, ಹಾಗೂ ರೇವತೀ ಪೂರ್ಣ ಇವುಗಳಿಗೆ ಮೀನರಾಶಿಯೆನ್ನುತ್ತಾರೆ.

ಮೇಲೆ ಕಾಣಿಸಿದ ಪದ್ಧತಿಯಿಂದ ರಾಶಿಯನ್ನು ಕಂಡುಹಿಡಿಯಲು ಬರುತ್ತದೆ.

೧. ಚು ೨. ಚೆ ೩. ಚೊ ೪. ಲಾ—ಅಶ್ವಿನಿ
೧. ಲೀ ೨. ಲು ೩. ಲೇ ೪. ಲೋ—ಭರಣಿ
೧. ಅ ೨. ಇ ೩. ಉ ೪. ಎ—ಕೃತ್ತಿಕಾ
೧. ಒ ೨. ವಾ ೩. ವಿ ೪. ವೂ—ರೋಹಿಣಿ
೧. ವೆ ೨. ವೊ ೩. ಕಾ ೪. ಕೀ—ಮೃಗಶಿರಾ
೧. ಕಂ ೨. ಘ ೩. ಙ ೪. ಛ—ಆರಿದ್ರಾ
೧. ಕೆ ೨. ಕೋ ೩. ಹಾ ೪. ಹೀ—ಪುನರ್ವಸು
೧. ಹು ೨. ಹೇ ೩. ಹೋ ೪. ಡಾ—ಪುಷ್ಯ
೧. ಡಿ ೨. ಡು ೩. ಡೇ ೪. ಡೋ—ಆಶ್ಲೇಷಾ
೧. ಮಾ ೨. ಮೀ ೩. ಮು ೪. ಮೇ—ಮಘಾ
೧. ಮೋ ೨. ಟಾ ೩. ಟೀ ೪. ಟೂ—ಪೂರ್ವಾ
೧. ಟೇ ೨. ಟೋ ೩. ಪಾ ೪. ಪಿ—ಉತ್ತರಾ
೧. ಪು ೨. ಷ ೩. ಣ ೪. ಠ—ಹಸ್ತಾ
೧. ಪೆ ೨. ಪೊ ೩. ರಾ ೪. ರೀ—ಚಿತ್ರಾ
೧. ರು ೨. ರೆ ೩. ರೋ ೪. ತಾ—ಸ್ವಾತಿ
೧. ತಿ ೨. ತು ೩. ತೆ ೪. ತೊ—ವಿಶಾಖಾ
೧. ನಾ ೨. ನೀ ೩. ನು ೪. ನೆ—ಅನುರಾಧಾ
೧. ನೊ ೨. ಯಾ ೩. ಯಿ ೪. ಯು—ಜ್ಯೇಷ್ಠಾ
೧. ಯೇ ೨. ಯೋ ೩. ಭಾ ೪. ಭೀ—ಮೂಲಾ
೧. ಭೂ ೨. ಧಾ ೩. ಫ ೪. ಢಾ—ಪೂ.ಆಷಾಢಾ
೧. ಭೇ ೨. ಭೋ ೩. ಜಾ ೪. ಜಿ—ಉತ್ತರಾಷಾಢಾ
೧. ಖಿ ೨. ಖು ೩. ಖೇ ೪. ಖೋ—ಶ್ರವಣಾ
೧. ಗಾ ೨. ಗಿ ೩. ಗು ೪. ಗೆ—ಧನಿಷ್ಠಾ

೧. ಗೊ ೨. ಸಾ ೩. ಸಿ ೪. ಸೂ – ಶತತಾರಕಾ
೧. ಸೇ ೨. ಸೋ ೩. ದಾ ೪. ದಿ—ಪೂ. ಭಾದ್ರಪದಾ
೧. ದೂ ೨. ಥ ೩. ಝ ೪. ಞ—ಉ. ಭಾದ್ರಪದಾ
೧. ದೇ ೨. ದೋ ೩. ಚಾ ೪. ಚಿ—ರೇವತಿ

ಹೀಗೆ ಮೇಲೆ ಕೊಟ್ಟ ಜನ್ಮನಾಮದ ಅಕ್ಷರಗಳಿಂದ ನಕ್ಷತ್ರ, ಚರಣ ಮತ್ತು ರಾಶಿಯನ್ನು ಕಂಡುಹಿಡಿಯಲು ಬರುತ್ತದೆ.

**ಪುರುಷರಾಶಿಗಳು**– ಮೇಷ, ಮಿಥುನ, ಸಿಂಹ, ತುಲಾ, ಧನು, ಕುಂಭ **ಸ್ತ್ರೀರಾಶಿಗಳು** :– ವೃಷಭ, ಕರ್ಕ, ಕನ್ಯಾ, ವೃಶ್ಚಿಕ, ಮಕರ, ಮೀನ ರಾಶಿಗಳ ದಿಕ್ಕುಗಳು;– ಈ ಹನ್ನೆರಡು ರಾಶಿಗಳಲ್ಲಿ ಸಮಭಾಗಗಳನ್ನು ನಾಲ್ಕು ದಿಕ್ಕುಗಳಲ್ಲಿ ಮಾಡಿರುವರು.

ಪೂರ್ವಕ್ಕೆ:– ಮೇಷ, ಸಿಂಹ, ಧನು. ಪಶ್ಚಿಮಕ್ಕೆ– ಮಿಥುನ, ತುಲಾ, ಕುಂಭ, ಉತ್ತರಕ್ಕೆ :– ಕರ್ಕ, ವೃಶ್ಚಿಕ, ಮೀನ. ದಕ್ಷಿಣಕ್ಕೆ:– ವೃಷಭ, ಕನ್ಯಾ, ಮಕರ.

ಪುರುಷರಾಶಿಗಳು ಕ್ರೂರ; ಹಾಗೂ ಸ್ತ್ರೀ ರಾಶಿಗಳು ಸೌಮ್ಯ.

ಮೇಷ ಕರ್ಕ, ತುಲಾ, ಮಕರ, ಈ ರಾಶಿಗಳು ಚರರಾಶಿಗಳು, ಇವುಗಳ ವೃತ್ತಿ ಚಂಚಲವಾಗಿರುವುದು. ವೃಷಭ, ಸಿಂಹ, ವೃಶ್ಚಿಕ, ಕುಂಭ ರಾಶಿಗಳು ಸ್ಥಿರರಾಶಿಗಳು. ಇವುಗಳದು ಶಾಂತವೃತ್ತಿ. ಮಿಥುನ, ಕನ್ಯಾ, ಧನು, ಮೀನ ದ್ವಿಸ್ವಭಾವಿಗಳು. ಇವುಗಳ ವೃತ್ತಿ ದ್ವಿಸ್ವಭಾವ, ವಧೂವರರ ರಾಶಿ ಪರಿಶೀಲಿಸುವಾಗ, ಅವರವರ ಗುಣಾದಿಗಳನ್ನು ತಿಳಿಯಲು ಇದು ಉಪಯುಕ್ತವಾಗುವುದು,

ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಕುಂಭ, ಮೀನ ಈ ರಾಶಿಗಳು ಹಗಲಿನಲ್ಲಿ ಬಲಿಷ್ಠರಾಶಿಗಳು,

ಮೇಷ, ವೃಷಭ, ಮಿಥುನ, ಕರ್ಕ, ಧನು, ಮಕರ ಈ ರಾಶಿಗಳು ರಾತ್ರಿಯಲ್ಲಿ ಬಲಿಷ್ಠವಾದುವುಗಳು.

ಮೇಷ, ಸಿಂಹ, ಧನು—ಅಗ್ನಿರಾಶಿಗಳು.

ವೃಷಭ, ಕನ್ಯಾ, ಮಕರ—ಭೂರಾಶಿಗಳು.

ಮಿಥುನ, ತುಲಾ, ಕುಂಭ—ವಾಯುರಾಶಿಗಳು;

ಕರ್ಕ, ವೃಶ್ಚಿಕ, ಮೀನ—ಜಲರಾಶಿಗಳು.

### ರಾಶಿಗಳ ಸ್ವರೂಪ

ಮೇಷ-ಕುರಿ; ವೃಷಭ—ಎತ್ತು; ಮಿಥುನ—ವೀಣೆಬಾರಿಸುವ ನಗೆ ಮೊಗದ ದಂಪತಿ; ಕರ್ಕ—ಏಡಿ; ಸಿಂಹ—ಸಿಂಹ; ಕನ್ಯಾ—ಒಂದು ಹಸ್ತದಲ್ಲಿ ಧಾನ್ಯಗಳ ಸಸಿಹಿಡಿದು ನೌಕೆಯಲ್ಲಿ ಕುಳಿತ ಕುಮಾರಿ; ತುಲಾ-ತಕ್ಕಡಿ ಹಿಡಿದಿರುವ ಮನುಷ್ಯ; ವೃಶ್ಚಿಕ-ಚೇಳು; ಧನು—ಕಟಿಪ್ರದೇಶದೀಚ ಅಶ್ವಾಕೃತಿ ಯುಳ್ಳ ಧನುರ್ಧಾರಿ ಪುರುಷ; ಮಕರ—ಮೊಸಳೆ; ಕುಂಭ—ಕೈಯ್ಯಲ್ಲಿ ಕೊಡ ಹಿಡಿದ ಮನುಷ್ಯ; ಮೀನ—ತಿರುವು-ಮುರುವಾಗಿದ್ದೆರಡು ಮೀನುಗಳು.

### ರಾಶಿಗಳ ವರ್ಣ, ವಶ್ಯ ಹಾಗೂ ರಾಶ್ಯಾಧಿಪಗಳು

| ರಾಶಿ | ವರ್ಣ | ವಶ್ಯ | ರಾಶ್ಯಾಧಿಪ |
|---|---|---|---|
| ಮೇಷ | ಕ್ಷತ್ರಿಯ | ಚತುಷ್ಪಾದ | ಮಂಗಳ |
| ವೃಷಭ | ವೈಶ್ಯ | ಚತುಷ್ಪಾದ | ಶುಕ್ರ |
| ಮಿಥುನ | ಶೂದ್ರ | ಮಾನವ | ಬುಧ |
| ಕರ್ಕ | ವಿಪ್ರ | ಜಲಚರ | ಚಂದ್ರ |
| ಸಿಂಹ | ಕ್ಷತ್ರಿಯ | ವನಚರ | ರವಿ |
| ಕನ್ಯಾ | ವೈಶ್ಯ | ಮಾನವ | ಬುಧ |
| ತುಲಾ | ಶೂದ್ರ | ಮಾನವ | ಶುಕ್ರ |
| ವೃಶ್ಚಿಕ | ವಿಪ್ರ | ಕೀಟಕ | ಮಂಗಳ |
| ಧನು | ಕ್ಷತ್ರಿಯ | ಮಾನವ | ಗುರು |
| ಮಕರ | ವೈಶ್ಯ | ಜಲಚರ | ಶನಿ |
| ಕುಂಭ | ಶೂದ್ರ | ಮಾನವ | ಶನಿ |
| ಮೀನ | ವಿಪ್ರ | ಜಲಚರ | ಗುರು |

ಹೀಗೆ ಪ್ರತಿಯೊಂದು ರಾಶಿಯ ವರ್ಣ, ವಶ್ಯ, ರಾಶ್ಯಾಧಿಪ ಇವುಗಳನ್ನು ತಿಳಿದುಕೊಳ್ಳಬಹುದು.

## ಗ್ರಹಗಳ ಮಿತ್ರತ್ವ, ಸಮತ್ವ, ಶತ್ರುತ್ವ

| | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು |
|---|---|---|---|---|---|---|---|---|---|
| ಮಿತ್ರ | ಚಂದ್ರ<br>ಕುಜ<br>ಗುರು | ರವಿ<br>ಬುಧ | ರವಿ<br>ಚಂದ್ರ<br>ಗುರು | ರವಿ<br>ಶುಕ್ರ | ರವಿ<br>ಚಂದ್ರ<br>ಮಂಗಳ | ಬುಧ<br>ಶನಿ | ಬುಧ<br>ಶುಕ್ರ | ಶುಕ್ರ<br>ಬುಧ<br>ಶನಿ | ಬುಧ<br>ಶುಕ್ರ<br>ಶನಿ |
| ಸಮ | ಬುಧ | ಮಂಗಳ<br>ಗುರು<br>ಶುಕ್ರ<br>ಶನಿ | ಶುಕ್ರ<br>ಶನಿ | ಮಂಗಳ<br>ಗುರು<br>ಶನಿ | ಶನಿ | ಮಂಗಳ<br>ಗುರು | ಗುರು | ಗುರು | ಗುರು |
| ಶತ್ರು | ಶನಿ<br>ಕೇತು<br>ಶುಕ್ರ | ರಾಹು | ಬುಧ | ಚಂದ್ರ | ಬುಧ<br>ಶುಕ್ರ | ರವಿ<br>ಚಂದ್ರ | ರವಿ<br>ಚಂದ್ರ<br>ಮಂಗಳ | ರವಿ<br>ಚಂದ್ರ<br>ಕುಜ | ರವಿ<br>ಚಂದ್ರ<br>ಕುಜ |

ಕುಂಡಲಿಯಲ್ಲಿ ಯಾವ ಸ್ಥಾನದಲ್ಲಿ ಗ್ರಹವಿರುವುದೋ, ಆ ಸ್ಥಾನದಲ್ಲಿ ೨-೪-೫-೯-೧೦-೧೧ ಈ ಸ್ಥಾನಗಳಲ್ಲಿ ಯಾವುದೇ ಗ್ರಹವಿದ್ದರೂ, ಆ ಗ್ರಹಗಳು ತಾತ್ಕಾಲಿಕವಾಗಿ ಮಿತ್ರರಾಗುವರು, ಮೇಲೆ ಹೇಳಿದ ಸ್ಥಾನಗಳನ್ನು ಬಿಟ್ಟು ಉಳಿದ ಯಾವುದೇ ಸ್ಥಾನದಲ್ಲಿ ಗ್ರಹಗಳಿದ್ದರೂ, ಆ ಗ್ರಹಗಳು ಶತ್ರುಗಳಾಗುವರು. ತಾತ್ಕಾಲಿಕ ಮಿತ್ರತ್ವ ಮತ್ತು ನೈಸರ್ಗಿಕ ಮಿತ್ರತ್ವ ಹೀಗೆ ಎರಡೂ ಭಾಗಗಳು ಕೂಡಿದರೆ, ಆ ಗ್ರಹವು ಅಧಿಮಿತ್ರವಾಗುವುದು. ನೈಸರ್ಗಿಕ ಶತ್ರುವಿದ್ದು ತಾತ್ಕಾಲಿಕ ಶತ್ರುವಾದರೆ ಅಧಿಶತ್ರುವಾಗುವುದು. ಮಿತ್ರತ್ವವಿದ್ದರೆ ಶುಭಫಲವೂ ಶತ್ರುತ್ವವಿದ್ದರೆ ಅನಿಷ್ಟ ಫಲವೂ ದೊರೆಯುವವು.

ದೇಹದಲ್ಲಿಯ ಅಸ್ಥಿಗೆ ರವಿ, ರಕ್ತಕ್ಕೆ ಚಂದ್ರ, ಮಜ್ಜಾಭಾಗಕ್ಕೆ ಮಂಗಳ, ತೊಗಲಿಗೆ ಬುಧ, ಸೆಣಕ್ಕೆ ಗುರು, ವೀರ್ಯಕ್ಕೆ ಶುಕ್ರ ಮತ್ತು ಸ್ನಾಯುಗಳಿಗೆ ಶನಿ,—ಹೀಗೆ ಗ್ರಹಗಳು ದೇಹದಲ್ಲಿಯ ಆಯಾ ಭಾಗಕ್ಕೆ ಅಧಿಪತಿಗಳಾಗಿದ್ದಾರೆ.

ವಧೂ-ವರರ ಕುಂಡಲಿಗಳನ್ನು ಪರಿಶೀಲಿಸುವಾಗ ಗ್ರಹಗಳ ಆಂದರೆ ಆಯಾ ರಾಶಿಗಳಲ್ಲಿಯ ಶತ್ರು-ಮಿತ್ರತ್ವವನ್ನು ತಿಳಿದುಕೊಳ್ಳಬಹುದು. ಹಾಗೂ ದೇಹದ ಯಾವ ಭಾಗ ಹೇಗೆ ಇರತ್ತದೆ ಎಂಬುದನ್ನು ತಿಳಿಯಬಹುದು.

ಶುಭಗ್ರಹ-ಬುಧ, ಗುರು, ಶುಕ್ರ ಮತ್ತು ಬಲವಾನ್ ಚಂದ್ರ.

ಪಾಪಗ್ರಹ-ರವಿ, ಮಂಗಳ, ಶನಿ, ರಾಹು, ಕೇತು ಮತ್ತು ಕ್ಷೀಣಚಂದ್ರ ಹಾಗೂ ಪಾಪಗ್ರಹಯುಕ್ತನಾದ ಬುಧ. ಇದರಿಂದ ವಧೂ-ವರರ ಸ್ವಭಾವ ತಿಳಿಯಲು ಬರುತ್ತದೆ.

ಪುರುಷಗ್ರಹ-ರವಿ, ಮಂಗಳ, ಗುರು.

ಸ್ತ್ರೀಗ್ರಹ-ಚಂದ್ರ, ಶುಕ್ರ. ನಪುಂಸಕ-ಬುಧ, ಶನಿ.

ರವಿ, ಚಂದ್ರ, ಗುರು ಇವು ಸತ್ತ್ವಗುಣಪ್ರಧಾನ ಗ್ರಹಗಳು. ಬುಧ-ಶುಕ್ರರು ರಜೋಗುಣವನ್ನು ವೃದ್ಧಿಮಾಡುತ್ತಾರೆ. ಶನಿ, ಮಂಗಳ, ರಾಹು ಈ ಗ್ರಹಗಳು ತಮೋಗುಣಾತ್ಮಕ ಸಂಗತಿಗಳನ್ನು ಉಂಟುಮಾಡುವವು.

## ಗ್ರಹಗಳ ಸ್ವಭಾವ

ರವಿ-ಸ್ಥಿರ, ಚಂದ್ರ-ಚಂಚಲ, ಮಂಗಳ-ಉಗ್ರ, ಬುಧ-ಮಿಶ್ರ, ಗುರು-ಕ್ಷಿಪ್ರ, ಶನಿ-ದಾರುಣ-ಹೀಗೆ ಗ್ರಹಗಳ ಸ್ವಭಾವಗಳಿರುತ್ತವೆ.

## ಗ್ರಹಗಳ ಜಾತಿ

ಗುರು, ಶುಕ್ರ – ಬ್ರಾಹ್ಮಣ; ರವಿ, ಮಂಗಳ – ಕ್ಷತ್ರಿಯ; ಚಂದ್ರ, ಬುಧ-ವೈಶ್ಯ; ಶನಿ, ರಾಹು, ಕೇತು-ಅಂತ್ಯಜ.

## ಗ್ರಹಗಳ ಕಾಲಬಲವು

ಚಂದ್ರ, ಮಂಗಳ, ಶನಿ ಈ ಗ್ರಹಗಳು ರಾತ್ರಿಯಲ್ಲಿ ಬಲವಾಗಿ ಇರುವವು. ಬುಧ ಸರ್ವಕಾಲದಲ್ಲಿಯೂ ಬಲವಂತ. ಉಳಿದ ಗ್ರಹಗಳು ಹಗಲಿ

ಸಲ್ಲಿ ಬಲವಂತವಾಗಿರುತ್ತವೆ. ಶುಭಗ್ರಹಗಳು ಶುಕ್ಲಪಕ್ಷದಲ್ಲಿಯೂ ಪಾಪ ಗ್ರಹಗಳು ಕೃಷ್ಣ ಪಕ್ಷದಲ್ಲಿಯೂ ಬಲಶಾಲಿಯಾಗಿರುತ್ತವೆ. ಶುಕ್ಲಪಕ್ಷ ಪ್ರತಿಪದೆಯಿಂದ ದಶಮಿಯವರೆಗೆ ಚಂದ್ರನು ಮಧ್ಯಮ ಬಲವುಳ್ಳವನೂ ಶುಕ್ಲಪಕ್ಷ ದಶಮಿಯಿಂದ ಕೃಷ್ಣಪಕ್ಷಪಂಚಮಿಯವರೆಗೆ ಚಂದ್ರನು ಪೂರ್ಣ ಬಲವುಳ್ಳವನೂ, ಕೃಷ್ಣಪಕ್ಷ ಪಂಚಮಿಯಿಂದ ಅಮಾವಾಸ್ಯೆಯವರೆಗೆ ಚಂದ್ರನು ಕ್ಷೀಣನೂ ಆಗುವನು,

ಕ್ಷೀಣಚಂದ್ರನ ಮೇಲೆ ಗುರು ಇಲ್ಲವೆ ಶುಕ್ರನ ದೃಷ್ಟಿ ಇದ್ದರೆ. ಪೂರ್ಣ ಚಂದ್ರನಾಗುತ್ತಾನೆ. ಕುಜ. ಬುಧ, ಗುರು. ಶುಕ್ರ. ಶನಿ ಈ ಗ್ರಹಗಳು ಎರಡನೆಯ ಗ್ರಹಗಳ ಯುತಿಕಾಲದಲ್ಲಿ ಬಲಿಷ್ಠವಾಗುವವು. ಸೂರ್ಯ–ಚಂದ್ರರು ಉತ್ತರಾಯಣದಲ್ಲಿ ಬಲಿಷ್ಠರಾಗುವರು.

ಯಾವುದೇ ಗ್ರಹ ರವಿಯೊಡನೆ ಇದ್ದಾಗ ಅಸ್ತನಾಗುತ್ತಾನೆ: ಅಸ್ತನಾಗಿದ್ದ ಗ್ರಹದ ಶುಭಪರಿಣಾಮ ಲಭಿಸುವುದಿಲ್ಲ. ಯಾವುದೇ ಗ್ರಹ ವಕ್ರಿಯಾದಾಗ ಅರ್ಧ ಫಲವೂ ಹಾಗೂ ವಕ್ರಗತಿಯಾಗಿಯೂ ದೊರೆಯುತ್ತದೆ.

## ಕಾರಕಗ್ರಹ

ರವಿ–ಅರಸ. ಚಂದ್ರ–ಪ್ರಧಾನಿ. ಕುಜ–ಸೇನಾಪತಿ, ಬುಧ–ಯುವರಾಜ. ಗುರು–ಮಂತ್ರಿ, ಶುಕ್ರ–ಗುಪ್ತಮಂತ್ರಿ. ಶನಿ–ದೂತ. ರಾಹು ಕೇತು–ಸೇವಕರು.

## ಗ್ರಹಗಳ–ಅವಯವ

ರವಿ-ಆತ್ಮ. ಚಂದ್ರ - ಮನಸ್ಸು. ಮಂಗಳ-ಸತ್ವ. ಬುಧ–ವಾಚಾ. ಗುರು–ಜೀವ. ಶುಕ್ರ–ಕಾಮ, ಶನಿ–ದುಃಖ.

## ಸ್ಥಾನಬಲ:ಗ್ರಹಗಳ ಉಚ್ಚನೀಚತ್ವ ಹಾಗೂ ಮೂಲ ತ್ರಿಕೋನ

(೧) ಸೂರ್ಯನಿಗೆ ಸಿಂಹರಾಶಿಯಲ್ಲಿಯ ಮೊದಲನೆಯ ೨೦ ಭಾಗ ಮೂಲತ್ರಿಕೋಣ. ೧೦ ಭಾಗ ಸ್ವಕ್ಷೇತ್ರ. ಮೇಷರಾಶಿಯ ಮೊದಲನೆಯ ೧೦ ಭಾಗದವರೆಗೆ ಉಚ್ಚ; ೧೦ ನೆಯ ಭಾಗವು ಪರಮೋಚ್ಚ; ತುಲಾ ರಾಶಿಯು ನೀಚರಾಶಿಯು.

(೨) ಚಂದ್ರನಿಗೆ ಕರ್ಕರಾಶಿಯು ಸ್ವಗೃಹ. ವೃಷಭದ ಮೊದಲನೇ

೩ ಭಾಗ ಉಚ್ಚ ; ಉಳಿದ ೨೭ ಭಾಗ ಮೂಲ ತ್ರಿಕೋಣ. ವೃಶ್ಚಿಕೆಯು ನೀಚರಾಶಿಯು; ಅದರಲ್ಲಿಯೂ ಮೊದಲನೆಯ ೩ ಭಾಗ ಪರಮನೀಚವಾಗಿದೆ.

(೩) ಕುಜನಿಗೆ ಮೇಷ, ವೃಶ್ಚಿಕಗಳು ಸ್ವಕ್ಷೇತ್ರಗಳು. ಮೇಷದಲ್ಲಿಯು ಮೊದಲನೆಯ ೧೨ ಭಾಗ ಮೂಲ ತ್ರಿಕೋಣ; ಕೊನೆಯ ೧೮ ಭಾಗ ಸ್ವಕ್ಷೇತ್ರ. ಮಕರರಾಶಿಯು ೨೮ ಭಾಗ ಉಚ್ಚ; ಕರ್ಕದಲ್ಲಿಯು ೨೮ ಭಾಗ ಪರಮನೀಚ.

(೪) ಬುಧನಿಗೆ ಮಿಥುನ ಕನ್ಯಾಗಳು ಸ್ವಕ್ಷೇತ್ರ; ಅವರಲ್ಲಿಯೂ ಮೊದಲನೆಯ ೧೫ ಭಾಗ ಉಚ್ಚ; ಉಳಿದ ೫ ಭಾಗ ಮೂಲ ತ್ರಿಕೋಣ; ಕೊನೆಯ ೧೦ ಭಾಗ ಸ್ವಕ್ಷೇತ್ರ.

(೫) ಬೃಹಸ್ಪತಿಗೆ ಧನು–ಮೀನಗಳು ಸ್ವಕ್ಷೇತ್ರಗಳು: ಅವರಲ್ಲಿಯೂ ಧನುಸ್ಸಿನ ಮೊದಲನೆಯ ೧೦ ಭಾಗ ಮೂಲ ತ್ರಿಕೋಣ, ಕೊನೆಯ ೨೦ ಭಾಗ ಸ್ವಕ್ಷೇತ್ರ. ಕರ್ಕರಾಶಿಯು ಉಚ್ಚರಾಶಿಯು; ಮೊದಲನೆಯ ೫ ಭಾಗವಂತೂ ಪರಮೋಚ್ಚವು. ಮಕರವು ನೀಚವು. ಅದರಲ್ಲಿಯೂ ೫ ಭಾಗವಂತೂ ಪರಮ ನೀಚವು.

(೬) ಶುಕ್ರನಿಗೆ ವೃಷಭ–ತುಲಾರಾಶಿಗಳು ಸ್ವಕ್ಷೇತ್ರಗಳು. ಅವರಲ್ಲಿಯೂ ತುಲಾರಾಶಿಯ ಮೊದಲನೆಯ ೧೫ ಭಾಗ ಮೂಲತ್ರಿಕೋಣ. ಕೊನೆಯ ೧೫ ಭಾಗ ಸ್ವಕ್ಷೇತ್ರವು. ಮೀನರಾಶಿಯು ಉಚ್ಚರಾಶಿಯು; ಅದರಲ್ಲಿಯೂ ೨೭ ಭಾಗ ಪರಮ ಉಚ್ಚವು. ಕನ್ಯಾರಾಶಿಯು ನೀಚರಾಶಿಯು. ಅದರಲ್ಲಿಯೂ ೨೭ ಭಾಗ ಪರಮನೀಚ.

(೭) ಶನಿಗೆ ಮಕರ–ಕುಂಭಗಳು ಸ್ವಕ್ಷೇತ್ರ ಅದರಲ್ಲಿಯೂ ಕುಂಭದಲ್ಲಿಯ ಮೊದಲನೆಯ ೨೦ ಭಾಗ ಮೂಲ ತ್ರಿಕೋಣ: ಕೊನೆಯ ೨೦ ಭಾಗ ಸ್ವಕ್ಷೇತ್ರ, ತುಲಾರಾಶಿಯು ಉಚ್ಚರಾಶಿಯು; ಅದರಲ್ಲಿಯೂ ೨೦ ಭಾಗ ಪರಮ ಉಚ್ಚ. ಮೇಷರಾಶಿಯು ನೀಚ; ಅದರಲ್ಲಿಯ ೨೦ ಭಾಗ ಪರಮ ನೀಚ.

(೮) ರಾಹುವಿಗೆ ಕನ್ಯಾ ಸ್ವಕ್ಷೇತ್ರ, ಮಿಥುನ ಉಚ್ಚರಾಶಿ; ಧನು ನೀಚ ರಾಶಿ. ಕೇತುವಿಗೆ ಮೀನ ಸ್ವಕ್ಷೇತ್ರ; ಧನು ಉಚ್ಚರಾಶಿ; ಮಿಥುನ ನೀಚ. ಈ ಪ್ರಕಾರ ಗ್ರಹಗಳ ಬಲಾಬಲವನ್ನು ನಿರ್ಣಯಿಸಲಾಗಿದೆ.

## ಗ್ರಹಗಳ ದೃಷ್ಟಿ

ರವಿ-ಮಂಗಳರು ಊರ್ಧ್ವದೃಷ್ಟಿಯುಳ್ಳವರು; ಬುಧ-ಶುಕ್ರರು ತಿರ್ಯಕ್ ದೃಷ್ಟಿಯವರು. ಚಂದ್ರ-ಗುರು ಸಮದೃಷ್ಟಿಯುಳ್ಳವರು; ರಾಹು ಶನಿಯರು ಅಧೋದೃಷ್ಟಿಯವರು; ರವಿ, ಚಂದ್ರ, ಬುಧ ಶುಕ್ರ ಈ ಗ್ರಹಗಳು ಎಲ್ಲಿ ಇರುವರೋ ಆ ಸ್ಥಾನದಲ್ಲಿಯೂ ಮತ್ತು ಆ ಸ್ಥಾನದಿಂದ ೭ನೆಯ ಸ್ಥಾನದ ಮೇಲೆಯೂ ಅವರ ಸಂಪೂರ್ಣ ದೃಷ್ಟಿಯಿರುತ್ತದೆ. ಮಂಗಳನು ತಾನಿದ್ದ ಸ್ಥಳದಿಂದ ೪-೭-೮ನೆ ಯ ಸ್ಥಾನಗಳನ್ನು ನೋಡುತ್ತಾನೆ. ಶನಿಯು ತಾನು ಇರುವ ಸ್ಥಾನದಿಂದ ೩-೭-೧೦ನೇಯ ಸ್ಥಾನಗಳನ್ನು ನೋಡುತ್ತಾನೆ. ಗುರು ತಾನು ಇರುವ ಸ್ಥಾನದಿಂದ ೫-೭-೯ನೇಯ ಸ್ಥಾನವನ್ನು ನೋಡುತ್ತಾನೆ. ಪ್ರತಿಯೊಂದು ಗ್ರಹಗಳು ೭ನೆಯ ಸ್ಥಾನವನ್ನು ಸಂಪೂರ್ಣ ದೃಷ್ಟಿಯಿಂದ ನೋಡುತ್ತವೆ.

ಗ್ರಹಗಳ ಬಲಾಬಲದಂತೆ ಅವುಗಳ ದೃಷ್ಟಿಯು ಬಲಾಬಲ ಇರುತ್ತದೆ.

ನಕ್ಷತ್ರಗಳಿಂದ ಯೋನಿ, ವೈರಯೋನಿ, ಗಣ, ನಾಡಿ ಹೇಗೆ ಕಂಡು ಹಿಡಿಯಬೇಕು ಎಂಬುದನ್ನು ಈ ಕೆಳಗೆ ಕೊಟ್ಟಿದೆ-

| ನಕ್ಷತ್ರ | ಯೋನಿ | ವೈರಯೋನಿ | ಗಣ | ನಾಡಿ |
|---|---|---|---|---|
| ಅಶ್ವಿನಿ | ಅಶ್ವ | ಮಹಿಷಿ | ದೇವ | ಆದ್ಯ |
| ಭರಣಿ | ಗಜ | ಸಿಂಹ | ಮನುಷ್ಯ | ಆದ್ಯ |
| ಕೃತ್ತಿಕಾ | ಮೇಷ | ವಾನರ | ರಾಕ್ಷಸ | ಅಂತ್ಯ |
| ರೋಹಿಣಿ | ಸರ್ಪ | ನಕುಲ | ಮನುಷ್ಯ | ಅಂತ್ಯ |
| ಮೃಗಶಿರಾ | ಸರ್ಪ | ನಕುಲ | ದೇವ | ಮಧ್ಯ |
| ಆರಿದ್ರಾ | ಶ್ವಾನ | ಹರಿಣ | ಮನುಷ್ಯ | ಆದ್ಯ |
| ಪುನರ್ವಸು | ಮಾರ್ಜಾಲ | ಮೂಷಕ | ದೇವ | ಆದ್ಯ |
| ಪುಷ್ಯ | ಮೇಷ | ವಾನರ | ದೇವ | ಅಂತ್ಯ |
| ಆಶ್ಲೇಷಾ | ಮಾರ್ಜಾಲ | ಮೂಷಕ | ರಾಕ್ಷಸ | ಅಂತ್ಯ |
| ಮಘಾ | ಮೂಷಕ | ಮಾರ್ಜಾಲ | ರಾಕ್ಷಸ | ಅಂತ್ಯ |
| ಪೂರ್ವಾ | ಮೂಷಕ | ಮಾರ್ಜಾಲ | ಮನುಷ್ಯ | ಮಧ್ಯ |

| ನಕ್ಷತ್ರ | ಯೋನಿ | ವೈರಯೋನಿ | ಗಣ | ನಾಡಿ |
|---|---|---|---|---|
| ಉತ್ತರಾ | ಗೋ | ವ್ಯಾಘ್ರ | ಮನುಷ್ಯ | ಆದ್ಯ |
| ಹಸ್ತಾ | ಮಹಿಷಿ | ಅಶ್ವ | ದೇವ | ಆದ್ಯ |
| ಚಿತ್ರಾ | ವ್ಯಾಘ್ರ | ಗೋ | ರಾಕ್ಷಸ | ಮಧ್ಯ |
| ಸ್ವಾತೀ | ಮಹಿಷಿ | ಅಶ್ವ | ದೇವ | ಆದ್ಯ |
| ವಿಶಾಖಾ | ವ್ಯಾಘ್ರ | ಗೋ | ರಾಕ್ಷಸ | ಅಂತ್ಯ |
| ಅನುರಾಧಾ | ಮೃಗ | ಶ್ವಾನ | ದೇವ | ಮಧ್ಯ |
| ಜ್ಯೇಷ್ಠಾ | ಮೃಗ | ಶ್ವಾನ | ರಾಕ್ಷಸ | ಆದ್ಯ |
| ಮೂಲಾ | ಶ್ವಾನ | ಹರಿಣ | ರಾಕ್ಷಸ | ಆದ್ಯ |
| ಪೂರ್ವಾಷಾಢಾ | ವಾನರ | ಮೇಷ | ಮನುಷ್ಯ | ಮಧ್ಯ |
| ಉತ್ತರಾಷಾಢಾ | ನಕುಲ | ಸರ್ಪ | ಮನುಷ್ಯ | ಅಂತ್ಯ |
| ಶ್ರವಣಾ | ನಕುಲ | ಮೇಷ | ದೇವ | ಅಂತ್ಯ |
| ಧನಿಷ್ಠಾ | ವಾನರ | ಗಜ | ರಾಕ್ಷಸ | ಮಧ್ಯ |
| ಶತತಾರಕಾ | ಸಿಂಹ | ಮಹಿಷಿ | ರಾಕ್ಷಸ | ಆದ್ಯ |
| ಪೂ. ಭಾದ್ರಪದ | ಅಶ್ವ | ಗಜ | ಮನುಷ್ಯ | ಆದ್ಯ |
| ಉ. ಭಾದ್ರಪದಾ | ಗೋ | ವ್ಯಾಘ್ರ | ಮನುಷ್ಯ | ಮಧ್ಯ |
| ರೇವತಿ | ಗಜ | ಸಿಂಹ | ದೇವ | ಅಂತ್ಯ |

ಹೀಗೆ ನಕ್ಷತ್ರಗಳಿಂದ ನಾಡಿ, ಗಣ, ಯೋನಿ ಇವುಗಳು ಯಾವು ಯಾವವು ಎಂಬುದನ್ನು ತಿಳಿದುಕೊಂಡು, ವಧೂವರರ ಜನ್ಮ ಟಿಪ್ಪಣಿಯ ಬಗ್ಗೆ ವಿಚಾರ ಮಾಡಬೇಕು.

### ೩೬ ಗುಣಗಳು ಹೇಗೆ ಕೂಡುವವು ?

(೧) ವಧೂ-ವರರ ರಾಶಿ ಒಂದೇ ಇದ್ದು ನಕ್ಷತ್ರ ಭಿನ್ನವಾದಾಗ ೩೬ ಗುಣಗಳೆಂದು ಹಿಡಿಯಬೇಕು. ಉದಾ :—ವಧೂ-ವರರಲ್ಲಿ ಒಬ್ಬರದು ಅಶ್ವಿನಿ ಇನ್ನೊಬ್ಬರದು ಭರಣೀ ಹೀಗೆ.

(೨) ವಧೂವರರ ನಕ್ಷತ್ರ ಒಂದೇ ಇದ್ದು; ರಾಶಿ ಭಿನ್ನ ಭಿನ್ನವಾದಾಗ ೩೬ ಗುಣಗಳಿಂದು ಹಿಡಿಯಬೇಕು. ಉದಾ :- ಮೃಗಶಿರಾ ೧-೨ ಚರಣ ಒಬ್ಬರದು, ೩,೪ ಇನ್ನೊಬ್ಬರದು; ಇದರಂತೆ ಚಿತ್ರಾ,

(೩) ವಧೂವರರ ನಕ್ಷತ್ರ ಒಂದೇ ಇದ್ದು. ಚರಣ ಬೇರೆ ಬೇರೆ ಇದ್ದರೆ.

(೪) ವಧೂವರರ ರಾಶಿ ಹಾಗೂ ನಕ್ಷತ್ರ ಒಂದೇ ಇದ್ದು, ಚರಣ ಭಿನ್ನ ಭಿನ್ನವಾದರೆ ೩೬ ಗುಣಗಳಿಂದು ಹಿಡಿಯಬೇಕು.

ಈ ಪ್ರಕಾರ ೩೬ ಗುಣಗಳು ಕೂಡಿಬರುವ ನಾಲ್ಕು ಪ್ರಕಾರಗಳು ಇರುತ್ತವೆ. ಮೇಲೆ ಕೊಟ್ಟ ನಾಲ್ಕು ತರದಂತೆ ಯಾವುದೇ ೩೬ ಗುಣ ಕೂಡಿ ಬಂದುದ್ದಾದರೆ, ಏಕನಾಡಿ-ಮನುಷ್ಯಗಣ, ರಾಕ್ಷಸಗಣ ಈ ಯಾವುದೇ ದೋಷವೂ ಎಣಿಸಲ್ಪಡುವದಿಲ್ಲ, ಇದನ್ನು ಲಕ್ಷಿಸಿರಿ

ವಧೂವರರ ಟಿಪ್ಪಣಿ ನೋಡುವಾಗ ಕೆಳಗಿನ ಸಂಗತಿಗಳನ್ನು ನೋಡ ಬೇಕಾಗುವುದು;

(೧) ವರ್ಣ, (೨) ವಶ್ಯ, (೩) ತಾರಾ, (೪) ಯೋನಿ, (೫) ಗ್ರಹ ಮೈತ್ರಿ, (೬) ಗಣ, (೭) ಕೂಟ, (೮) ಮಂಗಳದೋಷ; ಇದಲ್ಲದೆ ಜನ್ಮ ನಕ್ಷತ್ರ, ಕುಂಡಲಿಯಲ್ಲಿ ಕಾಣುವ ಸ್ವಭಾವಗುಣಧರ್ಮಗಳನ್ನು ತಿಳಿದುಕೊಂಡು ವಧೂವರರ ಮೈತ್ರಿಯನ್ನು ದೃಢಪಡಿಸಬೇಕು. ಅದಕ್ಕಾಗಿ ನಮ್ಮ ಪೂರ್ವ ಜರು ಮೇಲೆ ಕೊಟ್ಟ ಸಂಗತಿಗಳಿಗೆ ಕೆಲವೊಂದು ಗುಣಗಳನ್ನು ಇಟ್ಟಿದ್ದಾರೆ;ಅವೆಲ್ಲ ಕೂಡಿ ಇದ್ದರೆ ೩೬ ಗುಣಗಳು; ಅವುಗಳಲ್ಲಿ ಕನಿಷ್ಠ ೧೮ ಗುಣ ಕೂಡಿ ಬಂದರೆ, ವಿವಾಹ ಮಾಡಬೇಕು; ಇಲ್ಲದಿದ್ದರೆ ವಿವಾಹ ಮಾಡಬಾರದು.

ವರ್ಣ ಇದಕ್ಕೆ ೧ ಗುಣ, ವಶ್ಯ ೨ ಗುಣ ತಾರಾ ೩ ಗುಣ, ಯೋನಿ ೪ ಗುಣ. ಗ್ರಹಮೈತ್ರಿ ೫ ಗುಣ. ಗಣ ಇದಕ್ಕೆ ೬ ಗುಣ, ಕೂಟ ಇದಕ್ಕೆ ೭ ಗುಣ. ನಾಡಿ ಇದಕ್ಕೆ ೮ ಗುಣ. ಬೇಕಾದಷ್ಟು ಗುಣ ಕೂಡಿ ಬಂದರೂ ಏಕ ನಾಡಿ ಆದರೆ ವಿವಾಹ ಮಾಡಬಾರದು. ಆದರೆ ೩೬ ಗುಣ ಕೂಡಿ ಬಂದರೆ- (ಹಿಂದೆ ಹೇಳಿದಂತೆ ಬಂದರೆ)-ಈ ದೋಷ ಹತ್ತುವದಿಲ್ಲ.

ವಧೂವರರ ಕುಂಡಲಿಯನ್ನು ಪರಿಶೀಲಿಸುವಾಗ ಈ ಎಂಟು ಸಂಗತಿ ಗಳನ್ನು ಲಕ್ಷಿಸಬೇಕಾಗುವುದೆಂದು ಅವುಗಳ ಗುಣಗಳನ್ನು ಕೊಟ್ಟಿದೆ. ಆದರೆ ಮುಖ್ಯವಾಗಿ ೪-೫ ಸಂಗತಿಗಳನ್ನು ಹೆಚ್ಚು ಮಹತ್ವ ಕೊಟ್ಟು ನೋಡ-

ಬೇಕು. ಏಕೆಂದರೆ ಅವಕ್ಕೆ ಹೆಚ್ಚು ಗುಣಗಳು ಇವೆ. ನಾಡೀ ವಿಚಾರಕ್ಕೆ ೮ ಗುಣ, ಕೂಟ ವಿಚಾರಕ್ಕೆ ೭ ಗುಣ; ಗಣವಿಚಾರಕ್ಕೆ ೬ ಗುಣ; ಗ್ರಹ ಮೈತ್ರಿಗೆ ೫ ಗುಣ; ಯೋನಿವಿಚಾರಕ್ಕೆ ೪ ಗುಣ–ಹೀಗೆ ಈ ಐದು ಸಂಗತಿ ಗಳು ಹೆಚ್ಚು ಮಹತ್ವದವು ಇವೆ; ಏಕೆಂದರೆ ಇವುಗಳಲ್ಲಿ ನಾಲ್ಕು ಸಂಗತಿ ಗಳು ಶುಭಗಳಾದರೂ ೨೨ ಗುಣ ಬರ್ದೇ ಬೀಳುತ್ತದೆ. ೧೮ ಗುಣಕ್ಕಿಂತ ಹೆಚ್ಚು ಬೀಳುವುದರಿಂದ ವಿವಾಹ ಮಾಡಲು ಅಡ್ಡಿ ಇಲ್ಲ; ಆದ್ದರಿಂದ ಈ ಐದೂ ಸಂಗತಿಯ ವಿಚಾರ ಹೇಗೆ ಮಾಡಬೇಕು ಎಂಬುದು ಸ್ಪಷ್ಟೀಕರಿಸುವ.

## ನಾಡೀ ವಿಚಾರ

ಸತ್ವ, ರಜ, ತಮಸ್ಸು ಹೇಗೆ ಸ್ವಭಾವದರ್ಶಕವೋ ಹಾಗೆಯೇ ವಾತ, ಪಿತ್ತ, ಕಫ ಇವು ಪ್ರಕೃತಿ ಗುಣದರ್ಶಕವಿರುತ್ತವೆ. ನಾಡಿ ನೋಡುವ ಉದ್ದೇಶ ವಿಷ್ಟೇ: ವಧೂವರರ ಪ್ರಕೃತಿಗಾಗಿ, ವಧೂವರರ ಗಣ ಒಂದೇ ಆದರೆ ಉತ್ತಮ; ಆದರೆ ವಧೂವರರದು ಒಂದೇ ನಾಡಿಯಾದರೆ ಉತ್ತಮವಲ್ಲ. ಹಾಗೂ ಏಕ ನಾಡಿ ವಿವಾಹ ಮಾಡಲೇಬಾರದು. ಏಕೆಂದರೆ ವಧೂವರರದು ಒಂದೇ ಗಣ ಆದರೆ ಸ್ವಭಾವ ಕೂಡಿಬರುತ್ತದೆ; ಆದರೆ ಒಂದೇ ನಾಡಿ ಆದರೆ, ಇಬ್ಬರದೂ ಒಂದೇ ಪ್ರಕೃತಿ ಆದರೆ ಸಂತಾನೋತ್ಪತ್ತಿಯೇ ಆಗುವುದಿಲ್ಲ; ವಿವಾಹದ ಉದ್ದೇಶ ಸ್ವಸಂತಾನೋತ್ಪತ್ತಿಯೇ ಆದ್ದರಿಂದ ಭಿನ್ನ ಭಿನ್ನ ನಾಡಿ ಬೇಕು. ಪ್ರತಿಯೊಂದು ನಕ್ಷತ್ರಕ್ಕೆ ಒಂದೊಂದು ಭಿನ್ನ ಭಿನ್ನ ನಾಡಿ ಇರುತ್ತದೆ. ಹಾಗೂ ನಾಡಿಗಳಲ್ಲಿ ೩ ಪ್ರಕಾರ ಇರುತ್ತವೆ. ಆದ್ಯ, ಮಧ್ಯ, ಅಂತ್ಯವೆಂದು.

ಯಾವ ನಕ್ಷತ್ರಕ್ಕೆ ಯಾವ ನಾಡಿಯೆಂಬುದು ಹಿಂದಿನ ಕೋಷ್ಟಕದಲ್ಲಿ ವಿವರಿಸಿದೆ, ಅದರಲ್ಲಿ ಅಶ್ವಿನೀ ನಕ್ಷತ್ರದಿಂದ ರೇವತೀ ನಕ್ಷತ್ರಗಳವರೆಗೆ ಪ್ರತಿ ಯೊಂದು ನಕ್ಷತ್ರದ ನಾಡಿಗಳನ್ನು ವಿವರಿಸಿದೆ.

ವಧೂವರರದು ಭಿನ್ನನಾಡಿ ಆದರೆ, ಅದಕ್ಕೆ ೮ ಗುಣಗಳು; ಇಬ್ಬರದೂ ಒಂದೇ ನಾಡಿ ಆದರೆ, ಏಕನಾಡಿ ಆದರೆ ಶೂನ್ಯ ಗುಣ ಬರುವುದು; ಮತ್ತು ಏಕನಾಡಿ ವಿವಾಹ ಸರ್ವಕಡೆಯಲ್ಲಿಯೂ ಮಾನ್ಯ ಇರುವುದಿಲ್ಲ.

(೩೬ ಗುಣ ಕೂಡಿದ್ದರೆ ಏಕನಾಡಿ ದೋಷವಿಲ್ಲ. ಆದರ ಮಾಹಿತಿ ಹಿಂದೆ ಕೊಟ್ಟಿದೆ.)

## ನಕ್ಷತ್ರ ತ್ರಿದೋಷ ವಿಚಾರ

| ವಾತ | ಪಿತ್ತ | ಕಫ |
|---|---|---|
| ಅಶ್ವಿನಿ | ಭರಣೀ | ಕೃತ್ತಿಕಾ |
| ಆರಿದ್ರಾ | ಮೃಗಶಿರಾ | ರೋಹಿಣಿ |
| ಪುನರ್ವಸು | ಪುಷ್ಯ | ಆಶ್ಲೇಷಾ |
| ಉತ್ತರಾ | ಪೂರ್ವ | ಮಘಾ |
| ಹಸ್ತಾ | ಚಿತ್ತಾ | ಸ್ವಾತೀ |
| ಜ್ಯೇಷ್ಠಾ | ಅನುರಾಧ | ವಿಶಾಖ |
| ಮೂಲಾ | ಪೂರ್ವಾಷಾಢ | ಉತ್ತರಾಷಾಢ |
| ಶತತಾರಕಾ | ಧನಿಷ್ಠಾ | ಶ್ರವಣಾ |
| ಪೂರ್ವಾಭಾದ್ರಪದ | ಉತ್ತರಾಭಾದ್ರಪದ | ರೇವತಿ |

ಉದಾ:– ವಧೂ-ವರರಲ್ಲಿ ಒಬ್ಬರದು ಪುಷ್ಯನಕ್ಷತ್ರ, ಇನ್ನೊಬ್ಬರದು ಅಶ್ವಿನೀ ನಕ್ಷತ್ರ ಇದೆ ಎಂದು ತಿಳಿಯಿರಿ. ಪುಷ್ಯ ನಕ್ಷತ್ರ ಇದು ಮಧ್ಯನಾಡಿ; ಅಶ್ವಿನೀ ನಕ್ಷತ್ರ ಇದು ಆದ್ಯನಾಡಿ. ಇದರಲ್ಲಿ ಭಿನ್ನನಾಡಿ ಆಗುವುದರಿಂದ ೮ ಗುಣ ಕೊಡುತ್ತವೆ. ಹೀಗೆ ಭಿನ್ನನಾಡಿಗಳಿಗೆ ೮ ಗುಣಗಳು.

## ನಾಡಿ ಗುಣ ನೋಡುವ ರೀತಿ

| ನಾಡಿ | ಆದ್ಯ | ಮಧ್ಯ | ಅಂತ್ಯ |
|---|---|---|---|
| ಆದ್ಯ | ೦ | ೮ | ೮ |
| ಮಧ್ಯ | ೮ | ೦ | ೮ |
| ಅಂತ್ಯ | ೮ | ೮ | ೦ |

ಆದುದರಿಂದ ಭಿನ್ನ ಭಿನ್ನ ನಾಡಿಗಳ ವಧೂವರರ ವಿವಾಹ ಮಾಡಬೇಕು. ಏಕನಾಡಿ ವಿವಾಹ ಜರುಗಿದರೆ, ಸಂಸಾರ ಚೆನ್ನಾಗಿ ಸಾಗದೆ ದಾಂಪತ್ಯ ಜೀವನ ಪ್ರತಿನಿತ್ಯ ಕಲಹ ಒದಗುವುದು. ಕೋರ್ಟಿನಲ್ಲಿ ವ್ಯಾಜ್ಯ ಹರಬೇಕಾಗುವುದು. ಹಾಗೂ ದಂಪತಿಗಳಲ್ಲಿ ಒಬ್ಬರು ಗೃಹತ್ಯಾಗ, ದೇಶತ್ಯಾಗ, ಸಂನ್ಯಾಸ ವ್ರತ ಸ್ವೀಕಾರ ಮಾಡುವರು; ಅಥವಾ ಇಂದ್ರಿಯಗಳ ಸ್ವಾಧೀನರಾಗಿ ಹೇಸಿ ಕೃತ್ಯ ಗಳಲ್ಲಿ ತೊಡಗುವರು.

### ಕೂಟವಿಚಾರ

ಕೂಟವೆಂದರೆ, ವಧೂವರರ ಟಿಪ್ಪಣಿ ನೋಡುವಾಗಿರುವ ಇನ್ನೊಂದು ಸಂಗತಿ. ಇದರಲ್ಲಿ ಎರಡು ಪ್ರಕಾರಗಳಿವೆ: ೧. ಸತ್ಕೂಟ. ೨. ಅಸತ್ ಕೂಟ. ೩. ಷಡಾಷ್ಟಕ, ೪. ನವಪಂಚಕ, ದ್ವಿರ್ದ್ವಾದಶಕ ಇವು ಅಸತ್ ಕೂಟಗಳು. ಇವರಲ್ಲಿಯೂ ಗ್ರಾಹ್ಯ ಹಾಗೂ ವರ್ಜ್ಯ ಎಂಬ ಮತ್ತೆರಡು ಪ್ರಕಾರಗಳಿವೆ ಮತ್ತು ಪ್ರೀತಿಷಡಾಷ್ಟಕ, ಮುಂತಾದವುಗಳಿದ್ದರೆ ಇವುಗಳಿಗೆ ಗುಣಗಳಿವೆ.

ಸತ್‌ಕೂಟವೆಂದರೆ; ವಧೂವರರಲ್ಲಿ ಯಾರೊಬ್ಬರ ರಾಶಿಯಿಂದ ಮತ್ತೊಬ್ಬರ ರಾಶಿಯು ೩ನೆಯ, ೪ನೇಯು. ೭ನೇಯು ೧೦ನೆಯ, ೧೧ನೆಯ, ೧ನೆಯ ಹೀಗೆ ಇರಬೇಕು. ಹೀಗೆ ಸತ್‌ಕೂಟಗಳಿದ್ದರೆ ೭ ಗುಣಗಳು ಹೋದುತ್ತವೆ; ಅಸತ್‌ಕೂಟದ ಗುಣ ಶೂನ್ಯ ಇರುತ್ತದೆ. ಕೇವಲ ಅಸತ್ ಕೂಟದ ಗುಣಗಳಿಂದ ವಿವಾಹ ಮಾಡಲು ಅನುಮತಿ ಇದೆ; ಆದರೆ ಇತರ ಸಂಗತಿಗಳು ಶುಭದಾಯಕವಿದ್ದು, ಬಹಳ ಗುಣಗಳಿಂದಿರಬೇಕು.

### ತಾಜ್ಯ ಷಡಾಷ್ಟಕ

[೧] ಮೇಷ ಹಾಗೂ ಕನ್ಯಾ [೨] ಸಿಂಹ ಹಾಗೂ ಮಕರ [೩] ಧನು ಹಾಗೂ ವೃಷಭ [೪] ತುಲಾ ಹಾಗೂ ಮೀನ [೫] ಮಿಥುನ ಹಾಗೂ ವೃಶ್ಚಿಕ [೬] ಕುಂಭ ಹಾಗೂ ಕರ್ಕ.

### ತಾಜ್ಯ ನವಪಂಚಕ

[೧] ಕರ್ಕ ಹಾಗೂ ವೃಶ್ಚಿಕ.

### ತಾಜ್ಯ ದ್ವಿರ್ದ್ವಾದಶಕ

[೧] ಮೇಷ ಹಾಗೂ ವೃಷಭ, [೨] ಮಿಥುನ ಹಾಗೂ ಕರ್ಕ.

(೩) ತುಲಾ ಹಾಗೂ ವೃಶ್ಚಿಕ, (೪) ಧನು ಹಾಗೂ ಮಕರ, (೫) ಕುಂಭ ಹಾಗೂ ಮೀನ.

## ಗ್ರಾಹ್ಯ ಷಡಾಷ್ಟಕ

(೧) ಮೇಷ ಹಾಗೂ ವೃಶ್ಚಿಕ, (೨) ಸಿಂಹ ಹಾಗೂ ಮೀನ, (೩) ಧನು ಹಾಗೂ ಕರ್ಕ, (೪) ಮಿಥುನ ಹಾಗೂ ಮಕರ, (೫) ತುಲಾ ಹಾಗೂ ವೃಷಭ, (೬) ಕುಂಭ ಹಾಗೂ ಕನ್ಯಾ.

## ಗ್ರಾಹ್ಯ ನವಪಂಚಕ

[೧] ಮೇಷ ಹಾಗೂ ಸಿಂಹ, [೨] ಮಿಥುನ ಹಾಗೂ ತುಲಾ, [೩] ತುಲಾ ಹಾಗೂ ಕುಂಭ, [೪] ಧನು ಹಾಗೂ ಮೇಷ, [೫] ವೃಷಭ, ಹಾಗೂ ಕನ್ಯಾ [೬] ಸಿಂಹ ಹಾಗೂ ಧನು, (೭) ವೃಶ್ಚಿಕ ಹಾಗೂ ಮೀನ, (೮) ಮಕರ ಹಾಗೂ ವೃಷಭ.

## ಗ್ರಾಹ್ಯ ದ್ವಿರ್ದ್ವಾದಶಕ

(೧) ಮೇಷ ಹಾಗೂ ಮೀನ, (೨) ವೃಷಭ ಹಾಗೂ ಮಿಥುನ, [೩] ಕರ್ಕ ಹಾಗೂ ಸಿಂಹ, [೪] ಸಿಂಹ ಹಾಗೂ ಕನ್ಯಾ, [೫] ಕನ್ಯಾ ಹಾಗೂ ತುಲಾ, [೬] ವೃಶ್ಚಿಕ ಹಾಗೂ ಧನು, [೭] ಮಕರ ಹಾಗೂ ಕುಂಭ.

ಸತ್‌ಕೂಟವೆಂದರೆ ವಧೂ–ವರರ ರಾಶ್ಯಧಿಪರು ಪರಸ್ಪರ ಮಿತ್ರರಿದ್ದರೆ ಸತ್‌ಕೂಟ; ಶತ್ರುಗಳಿದ್ದರೆ ಅಸತ್‌ಕೂಟವೆಂದು ತಿಳಿಯಬೇಕು.

ಷಡಾಷ್ಟಕದಲ್ಲಿ ವರ್ಜ್ಯ ಷಡಾಷ್ಟಕಗಳನ್ನು ಹಿಂದೆ ಹೇಳಿದೆ; ಅವಕ್ಕೆ ಮೃತ್ಯುಷಡಾಷ್ಟಕವೆನ್ನುತ್ತಾರೆ, ಮತ್ತು ಗ್ರಾಹ್ಯಷಡಾಷ್ಟಕಕ್ಕೆ ಪ್ರೀತಿ ಷಡಾಷ್ಟಕವೆನ್ನುತ್ತಾರೆ. ಅಸತ್‌ಕೂಟ ವಧುವರರ ವಿವಾಹ ಮಾಡಬಹುದು; ಆದರೆ ಹೆಚ್ಚು ಗುಣಗಳು ಬೀಳಬೇಕು.

ಕೂಟ ಸಂಬಂಧದ ವಿಚಾರದಲ್ಲಿ ಕೆಲವೊಂದರ ಅಪವಾದಗಳು.

೧) ಸತ್‌ಕೂಟಕ್ಕೆ ೭ ಗುಣ; ಅಸತ್ ಕೂಟಕ್ಕೆ ೦ ಗುಣ–ಅಲ್ಲದೆ ವಧೂವರರಲ್ಲಿ ಪರಸ್ಪರ ಯೋನಿಮಿತ್ರತ್ವ ಅಥವಾ ಸ್ತ್ರೀದೂರತ್ವ ಇದ್ದರೆ ಷಡಾಷ್ಟಕ, ನವಪಂಚಕ, ದ್ವಿರ್ದ್ವಾದಶಕ ಇವುಗಳ ಗುಣ ಸಹ 4 ಇದೆ.

೨) ಯೋನಿಮಿತ್ರತ್ವ ಹಾಗೂ ಸ್ತ್ರೀದೂರತ್ವ ಇವುಗಳಲ್ಲಿ ಯಾವುದಾದರೂ ಒಂದು ಸಂಭವಿಸಿದರೆ ೧ ಗುಣ ಹಿಡಿಯಬೇಕು.

೩) ೩೬ ಗುಣ ಕೂಡಿದ್ದರೆ ಅಸತ್‌ಕೂಟದ ದೋಷವಿಲ್ಲ.

೪) ನಕ್ಷತ್ರ ಹಾಗೂ ಚರಣ ಒಂದೇ ಇದ್ದರೆ ವಿವಾಹ ಮಾಡಬಾರದು.

| ರಾಶಿ | ಮೇಷ | ವೃಷಭ | ಮಿಥುನ | ಕರ್ಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|
| ಮೇಷ | ೭ | ೦ | ೭ | ೭ | ೭ | ೦ | ೭ | ೦ | ೦ | ೭ | ೭ | ೭ |
| ವೃಷಭ | ೦ | ೭ | ೦ | ೭ | ೭ | ೦ | ೦ | ೭ | ೦ | ೦ | ೭ | ೭ |
| ಮಿಥುನ | ೭ | ೦ | ೭ | ೦ | ೭ | ೭ | ೦ | ೦ | ೭ | ೦ | ೦ | ೭ |
| ಕರ್ಕ | ೭ | ೭ | ೦ | ೭ | ೦ | ೭ | ೭ | ೦ | ೦ | ೭ | ೦ | ೦ |
| ಸಿಂಹ | ೦ | ೭ | ೭ | ೦ | ೭ | ೦ | ೭ | ೭ | ೦ | ೭ | ೭ | ೦ |
| ಕನ್ಯಾ | ೦ | ೦ | ೭ | ೭ | ೦ | ೭ | ೦ | ೭ | ೭ | ೦ | ೦ | ೭ |
| ತುಲಾ | ೭ | ೦ | ೦ | ೭ | ೭ | ೦ | ೭ | ೦ | ೭ | ೭ | ೦ | ೦ |
| ವೃಶ್ಚಿಕ | ೦ | ೭ | ೦ | ೦ | ೭ | ೭ | ೦ | ೭ | ೦ | ೭ | ೭ | ೦ |
| ಧನು | ೦ | ೦ | ೭ | ೦ | ೦ | ೭ | ೭ | ೦ | ೭ | ೦ | ೭ | ೭ |
| ಮಕರ | ೭ | ೦ | ೦ | ೭ | ೦ | ೦ | ೭ | ೭ | ೦ | ೭ | ೦ | ೭ |
| ಕುಂಭ | ೭ | ೭ | ೦ | ೦ | ೭ | ೦ | ೦ | ೭ | ೭ | ೦ | ೭ | ೦ |
| ಮೀನ | ೦ | ೭ | ೭ | ೦ | ೦ | ೭ | ೦ | ೦ | ೭ | ೭ | ೦ | ೦ |

ಇನ್ನೊಂದು ಉದಾಹರಣೆ; ವಧುವಿನದು ಮೇಷರಾಶಿ ಎಂದು ತಿಳಿಯಿರಿ: ಹಾಗೂ ವರನದು ಕನ್ಯಾ ಎಂದು ತಿಳಿಯಿರಿ. ಇಲ್ಲಿ ವಧೂವರರ ರಾಶ್ಯಾಧಿಪರು ಪರಸ್ಪರ ಶತ್ರುಗಳಾಗಿರುವುದರಿಂದ. ಇದು ಅಸತ್‌ಕೂಟವಾಯಿತು. ಆದ ರಿಂದ ಇದಕ್ಕೆ ವರ್ಜ್ಯಷಡಾಷ್ಟಕವೆನ್ನುತ್ತಾರೆ.

## ಸ್ತ್ರೀದೂರತ್ವ

೧) ವರನ ನಕ್ಷತ್ರದಿಂದ ವಧುವಿನ ನಕ್ಷತ್ರವು ದೂರ ಇದ್ದಷ್ಟು ಅತ್ಯುತ್ತಮವು; ಮತ್ತು ವಧುವಿನ ನಕ್ಷತ್ರದಿಂದ ವರನ ನಕ್ಷತ್ರವು ಎಷ್ಟು ಸಮೀಪ ಇರುವುದೋ ಅಷ್ಟು ಶುಭದಾಯಕವು.

೨) ವಧೂವರರ ರಾಶಿ ಒಂದೇ ಇದ್ದು, ವಧುವಿನ ನಕ್ಷತ್ರದಿಂದ ವರನ ನಕ್ಷತ್ರ ಎರಡನೆಯದಾದರೆ ಅದನ್ನು ತ್ಯಾಜ್ಯಮಾಡಬೇಕು. ಉದಾ: ವಧುವಿನದು ಅನುರಾಧಾ ಹಾಗೂ ವರನದು ಜ್ಯೇಷ್ಠಾ ಎಂದು ಕಲ್ಪಿಸಿರಿ. ಇಂತಹ ವಿವಾಹ ಮಾಡಬಾರದು. ಇಲ್ಲಿ ೩೬ ಗುಣ ಹಿಡಿದರೂ ವಿವಾಹಕ್ಕೆ ಅಷ್ಟೊಂದು ಶುಭದಾಯಕವಲ್ಲ. ಏಕೆಂದರೆ ಇಲ್ಲಿ ವಧುವಿನ ನಕ್ಷತ್ರದಿಂದ ವರನ ನಕ್ಷತ್ರವು ಎರಡನೆಯದಾಗುತ್ತದೆ.

(೩) ವಧುವಿನದು ಕೃತ್ತಿಕೆ, ವರನದು ಭರಣಿ; ವಧುವಿನದು ಶತತಾರಕಾ, ವರನದು ಧನಿಷ್ಠಾ–ಹೀಗೆ ಇದ್ದರೆ ವಿವಾಹ ಮಾಡಬಾರದು.

(೪) ಒಬ್ಬರ ರಾಶಿಯಿಂದ ಇನ್ನೊಬ್ಬರದು ೬ನೆಯದು ಅಥವಾ ೮ನೆಯದು ಇದ್ದರೆ ಷಡಾಷ್ಟಕ. ಇದರಂತೆ ೫ನೆಯ ೯ನೆಯದು ಇದ್ದರೆ, ನವಪಂಚಕವೆಂದೂ, ೨ನೆಯದು ೧೨ನೆಯದು ದ್ವಿರ್ದ್ವಾದಶಕವೆಂದೂ ಎನ್ನುತ್ತಾರೆ.

### ಗಣವಿಚಾರ

ಹಿಂದೆ ಹೇಳಿದಂತೆ ಒಂದೊಂದು ನಕ್ಷತ್ರಕ್ಕೆ ಒಂದೋದು ಭಿನ್ನ ಭಿನ್ನ ಗುಣಗಳಿರುತ್ತವೆ; ಇವನ್ನೂ ಗಣ ನೋಡುವ ಕೋಷ್ಟಕದಲ್ಲಿ ವಿವರಿಸಿದೆ. [೧] ವಧೂವರರ ಗಣ ಒಂದೇ ಇದ್ದರೆ, ಅದಕ್ಕೆ ೬ ಗುಣಗಳು ಬರುತ್ತವೆ. ಉದಾ: ವರನದು ದೇವ, ವಧೂವಿನದೂ ದೇವ—ವರನದೂ ರಾಕ್ಷಸ, ವಧುವಿನದೂ ರಾಕ್ಷಸ. ವರನದು ಮನುಷ್ಯ, ವಧುವಿನದೂ ಮನುಷ್ಯ — ಹೀಗೆ ಅವರಿಬ್ಬರದು ಒಂದೇ ಗಣ ಆದರೆ ಅತ್ಯುತ್ತಮವು. ಇದಕ್ಕೆ ೬ ಗುಣಗಳಿವೆ. [೨] ವರನದು ದೇವಗಣ, ವಧುವಿನದು ಮನುಷ್ಯ ಗಣವಾದರೂ ೬ ಗುಣಕೊಡಲು ಬರುತ್ತದೆ; ಇದು ಮಧ್ಯಮವು [೩] ವರನದು ಮನುಷ್ಯ ವಧುವಿನದು ದೇವಗಣ ಆದರೆ, ಇದಕ್ಕೆ ೫ ಗುಣ ಬರುತ್ತದೆ.

[೪] ವರನದು ರಾಕ್ಷಸ, ವಧುವಿನದು ದೇವಗಣ ಆದರೆ ೧ ಗುಣ ಬರುತ್ತದೆ. ಇದು ಕನಿಷ್ಠವು. ಇದರ ಹೊರತಾಗಿ ಬೇರೆ ಇದ್ದರೆ ಶೂನ್ಯಗುಣ ಬರುತ್ತದೆ. [೫] ವಧೂವರರಲ್ಲಿ ಒಬ್ಬರದು ರಾಕ್ಷಸ, ಇನ್ನೊಬ್ಬರದು ಮನುಷ್ಯ ಹೀಗಿದ್ದರೆ ಎಂದೂ ವಿವಾಹ ಮಾಡಬಾರದು. [೬] ವರನದು ರಾಕ್ಷಸ, ವಧುವಿನದು ಮನುಷ್ಯ ಹೀಗಿದ್ದರೆ ಎಷ್ಟೋ ಜನರು ವಿವಾಹ ಮಾಡುವರು. ಇವು ಸಹ ಅಯೋಗ್ಯವಿರುತ್ತದೆ.

ವಧು

| | | ದೇವ | ಮನುಷ್ಯ | ರಾಕ್ಷಸ |
|---|---|---|---|---|
| ವರ | ದೇವ | ೬ | ೬ | ೦ |
| | ಮನುಷ್ಯ | ೫ | ೬ | ೦ |
| | ರಾಕ್ಷಸ | ೧ | ೦ | ೬ |

(೧) ಇದರ ವಿರುದ್ಧ ಮಾಡಿದರೆ ಇಬ್ಬರಲ್ಲಿ ಒಬ್ಬರು ಮೃತ್ಯುವಿಗೀಡಾಗುವರು.

(೨) ಮನುಷ್ಯ-ರಾಕ್ಷಸ ಗಣಗಳಲ್ಲಿ ಮಾಡಿದರಂತೂ ಮೃತ್ಯುವಿಗೀಡಾಗುವುದು ಖಂಡಿತವು.

(೩) ವಧೂ-ವರರಲ್ಲಿ ಒಬ್ಬರದು ದೇವ ಇನ್ನೊಬ್ಬರದು ರಾಕ್ಷಸ ಇದ್ದರೆ ಪ್ರತಿದಿನ ಕಲಹ ಮಾಡುವರಲ್ಲದೇ ಸುಖಜೀವನ ಸಾಗಿಸುವುದಿಲ್ಲ.

(೪) ನಮ್ಮ ಹಿಂದೂ ಜನರಲ್ಲಿ ಪುರುಷನಿಗೆ ಪ್ರಾಮುಖ್ಯತೆ ಬಹಳ ಇರುತ್ತದೆ. ಅದಕ್ಕೋಸ್ಕರ ಗಣ ನೋಡುತ್ತಾರೆ.

[೫] ಪತಿ ಪತ್ನಿಯರಲ್ಲಿ ಒಬ್ಬರಿಗೊಬ್ಬರು ಅಧೀನರಾಗುವುದು ಈ ಗಣದಿಂದ ತಿಳಿಯುತ್ತದೆ.

## ಗ್ರಹಮಿತ್ರತ್ವ

ಪ್ರತಿಯೊಂದು ರಾಶಿಯ ರಾಶ್ಯಾಧಿಪ ಯಾರು ? ಅವನ ಮಿತ್ರರು ಯಾರು ? ಸಮಮಿತ್ರರು ಯಾರು, ಶತ್ರುಗಳು ಯಾರು ? ಎಂಬುದನ್ನು ಸಂಪೂರ್ಣವಾಗಿ ಹಿಂದೆ ಕೊಟ್ಟಿದೆ. ಇವುಗಳಿಂದ ವಧೂ–ವರರ ರಾಶಿಯಿಂದ ಗ್ರಹಮಿತ್ರತ್ವ ತೆಗೆಯಬೇಕು; ಇದರಿಂದ ಗುಣಗಳನ್ನು ಕೊಡಲು ಬರುತ್ತದೆ.

ವಧುವಿನದು

ವರನದು

| | ರವಿ | ಚಂದ್ರ | ಮಂಗಳ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ರವಿ | ೫ | ೫ | ೫ | ೪ | ೫ | ೦ | ೦ |
| ಚಂದ್ರ | ೫ | ೫ | ೪ | ೧/೨ | ೪ | ೧/೨ | ೧/೨ |
| ಮಂಗಳ | ೫ | ೪ | ೫ | ೧/೨ | ೫ | ೩ | ೧/೨ |
| ಬುಧ | ೪ | ೧ | ೧/೨ | ೫ | ೧/೨ | ೫ | ೪ |
| ಗುರು | ೫ | ೪ | ೫ | ೧/೨ | ೫ | ೧/೨ | ೩ |
| ಶುಕ್ರ | ೦ | ೧/೨ | ೩ | ೫ | ೧/೨ | ೫ | ೫ |
| ಶನಿ | ೦ | ೧/೨ | ೧/೨ | ೪ | ೩ | ೫ | ೫ |

ಹೀಗೆ ಗ್ರಹಗಳ ಮಿತ್ರತ್ವ ಕಂಡುಹಿಡಿಯಬೇಕು.

[೧] ವಧೂವರರ ರಾಶ್ಯಾಧಿಪ ಒಬ್ಬನೇ ಆದರೆ ಉತ್ತಮವು; ಹೀಗಿದ್ದರೆ ೫ ಗುಣ ಕೊಡಬಹುದು.

[೨] ವಧೂ–ವರರ ರಾಶ್ಯಾಧಿಪರು ಪರಸ್ಪರ ಮಿತ್ರರಾಗಿದ್ದರೂ ೫ ಗುಣ ಕೊಡಬಹುದು, ಇದು ಮಧ್ಯಮವು.

(೩) ವಧೂ-ವರರ: ರಾಶ್ಯಾಪರು ಪರಸ್ಪರ ಸಮಮಿತ್ರರಾಗಿದ್ದರೆ ೪ ಗುಣ ಕೊಡಬಹುದು.

(೪) ವಧೂ-ವರರ ರಾಶ್ಯಾಧಿಪರಲ್ಲಿ ಪರಸ್ಪರ ಸಮರಾಗಿದ್ದರೆ ೩ ಗುಣ ಹೊಂದುತ್ತದೆ.

(೫) ವಧೂ-ವರರ ರಾಶ್ಯಾಧಿಪರಲ್ಲಿ ಪರಸ್ಪರ ಸಮಶತ್ರುತ್ವವಿದ್ದರೆ $\frac{೧}{೨}$ ಗುಣಹೊಂದುತ್ತದೆ.

(೬) ವಧೂವರರ ರಾಶ್ಯಾಧಿಪರು ಪರಸ್ಪರರು ಬದ್ಧಶತ್ರುಗಳಿದ್ದರೆ ಶೂನ್ಯಗುಣ ಹೊಂದುತ್ತದೆ.

ಆದ್ದರಿಂದ, ಸ್ಮರಣದಲ್ಲಿಡುವ ಸಂಗತಿ ಎಂದರೆ, ಪರಸ್ಪರರು ಮಿತ್ರರು ೫ ಗುಣ; ಸಮಮಿತ್ರರು ೪ ಗುಣ, ಪರಸ್ಪರ ಸಮರು ೩, ಸಮಶತ್ರುಗಳು $\frac{೧}{೨}$ ಇಲ್ಲವೆ ೧, ಶತ್ರುಗಳು ಇದ್ದರೆ ಶೂನ್ಯ ಗುಣ.

## ಯೋನಿವಿಚಾರ

ಯೋನಿ ಎಂದರೆ: ಒಂದೊಂದು ನಕ್ಷತ್ರಕ್ಕೆ ಭಿನ್ನ ಭಿನ್ನ ಯೋನಿಗಳಿವೆ. ೧೪ ತರಹದ ಯೋನಿಗಳಿವೆ. ಇದರ ಮಾಹಿತಿಯನ್ನು ಈ ಹಿಂದೆ ಸಂಪೂರ್ಣ ವಿವರಿಸಿದೆ.

(೧) ವಧೂ-ವರರದು ಒಂದೇ ಯೋನಿ ಇದ್ದರೆ ಅದು ಉತ್ತಮವು; ಇದಕ್ಕೆ ೪ ಗುಣಗಳಿರುತ್ತವೆ. ಉದಾ:-ಇಬ್ಬರದೂ ಸಿಂಹವು ಇತ್ಯಾದಿ.

(೨) ವಧೂ-ವರರದು ವೈರಯೋನಿಯಿದ್ದರೆ ಶೂನ್ಯ ಗುಣವಿರುತ್ತದೆ. ಉದಾ:-ವರನದು ಸಿಂಹ, ವಧುವಿನದು ಗಜವಿದ್ದರೆ ೦. ಏಕೆಂದರೆ ಸಿಂಹ ಹಾಗೂ ಆನೆ ಪರಸ್ಪರ ಶತ್ರುಗಳಿವೆ.

(೩) ಮೇಷ, ಗೋ, ಮಹಿಷಿ, ಶ್ವಾನ ಈ ಯೋನಿಗಳು ಸಾಮಾನ್ಯಭಾವದವು. ಆದ್ದರಿಂದ ವಧೂವರರಲ್ಲಿ ಈ ಯೋನಿಗಳಿದ್ದರೆ ೩ ಗುಣ ಹೊಂದುತ್ತವೆ. ಇಂತಹ ವಧೂವರರ ವಿವಾಹವು ಮಧ್ಯಮವು.

(೪) ಸಿಂಹ ಮತ್ತು ಆನೆ, ಗೋ ಹಾಗೂ ವ್ಯಾಘ್ರ, ಹಾವು ಮತ್ತು ಮುಂಗಲಿ, ಇಲಿ ಹಾಗೂ ಬೆಕ್ಕು, ಶ್ವಾನ ಹಾಗೂ ಮೃಗ, ಮಹಿಷಿ ಹಾಗೂ ಅಶ್ವ ಇವು ಪರಸ್ಪರ ಶತ್ರುಯೋನಿಗಳಿದ್ದ ಕಾರಣ, ಇದಕ್ಕೆ ಮಹಾವೈರ ಅಥವಾ ಅಜನ್ಮ ವೈರಿಗಳದ್ದ ಕಾರಣ, ಇದಕ್ಕೆ ಶೂನ್ಯಗುಣ ಬರುತ್ತದೆ. ಆದ್ದರಿಂದ ಇಂಥ ಶತ್ರುತ್ವಯೋನಿಗಳ ವಧೂವರರ ವಿವಾಹ ಮಾಡಬಾರದು.

(೫) ವಧೂವರರು ಒಂದೇ ಯೋನಿಯವರಾದರೆ ೪ ಗುಣ. ವೈರ ಯೋನಿ ಇದ್ದರೆ ೦ (ಶೂನ್ಯ) ಗುಣ. ವೈರಯೋನಿಯಲ್ಲಿ ಮತ್ತೆ ಎರಡು ಪ್ರಕಾರಗಳಿವೆ; (೧) ಜನ್ಮ ಶತ್ರುತ್ವ (೨) ಸಾಮಾನ್ಯ ಶತ್ರುತ್ವ. ಹೇಗೆಂದರೆ ಹಾವು ಮತ್ತು ಮುಂಗಲಿ ಅಜನ್ಮ ಶತ್ರುಗಳು. ಆದರೆ ಹಾವು ಹಾಗೂ ಬೆಕ್ಕು ಸಾಮಾನ್ಯ ಶತ್ರುಗಳು. ಇಲ್ಲಿ ಹಾವು ಹಾಗೂ ಮುಂಗಲಿ ಇದ್ದ ವಧೂವರರ ಯೋನಿ ಶೂನ್ಯಗುಣ; ಹಾವು ಹಾಗೂ ಬೆಕ್ಕು ಇದ್ದ ಯೋನಿಗಳಿಗೆ ೧ ಗುಣ ಇದೆ. ಅದರಂತೆ ಸಾಮಾನ್ಯ ಮಿತ್ರತ್ವವಿದ್ದರೆ ೩ ಗುಣ ಕೊಡಬೇಕು.

ಹೀಗೆ ವಧೂವರರ ಕುಂಡಲಿಯನ್ನು ನೋಡುವಾಗ ಸೂಕ್ಷ್ಮವಾಗಿ ಯೋನಿ ವಿಚಾರ ಪರಿಶೀಲಿಸಬೇಕು.

(೧) ಸಂತಾನ ಹಾಗೂ ಸಂತಾನ ಸುಖ ಇವುಗಳಿಗಾಗಿ ಮುಖ್ಯವಾಗಿ ಯೋನಿ ವಿಚಾರ ಮಾಡುತ್ತಾರೆ.

(೨) ದಂಪತಿಗಳಲ್ಲಿ ಪರಸ್ಪರರು ಪ್ರೇಮದಿಂದಿದ್ದರೆ ಸಂತಾನೋತ್ಪತ್ತಿ ಸಹಾಯಕರು.

(೩) ದಂಪತಿಗಳಲ್ಲಿ ಯಾವುದೇ ಪ್ರಕಾರದ ರೋಗ ಬಾರದಿರಲು ಈ ಯೋನಿಯ ಬಗ್ಗೆ ವಿಚಾರ ಮಾಡುತ್ತಾರೆ.

## ತಾರಾ ವಿಚಾರ

(೧) ವಧುವಿನ ನಕ್ಷತ್ರದಿಂದ ವರನ ನಕ್ಷತ್ರದ ತನಕ ಎಣಿಸಬೇಕು. ಬಂದಂತಹ ಸಂಖ್ಯೆಗೆ ೯ ರಿಂದ ಭಾಗಿಸಬೇಕು. ಶೇಷವು ೦ । ೧ । ೨ । ೪ । ೬ । ೮ । ಉಳಿದರೆ ಶುಭತಾರೆ ಎಂದು ತಿಳಿಯಬೇಕು. ಶೇಷವು ೩ । ೫ । ೭ ।

## ಯೋನಿವಿಚಾರದ ಕೋಷ್ಟಕ

| | ಅಶ್ವ | ಗಜ | ಮೇಷ | ಸರ್ಪ | ಶ್ವಾನ | ಮಾರ್ಜಾರ | ಮೂಷಕ | ಗೋ | ಮಹಿಷಿ | ವ್ಯಾಘ್ರ | ಮೃಗ | ವಾನರ | ನಕುಲ | ಸಿಂಹ |
|---|---|---|---|---|---|---|---|---|---|---|---|---|---|---|
| ಅಶ್ವ | ೪ | ೨ | ೨ | ೨ | ೨ | ೨ | ೨ | ೨ | ೦ | ೧ | ೨ | ೨ | ೨ | ೧ |
| ಗಜ | ೨ | ೪ | ೨ | ೨ | ೨ | ೨ | ೨ | ೨ | ೨ | ೧ | ೨ | ೨ | ೨ | ೦ |
| ಮೇಷ | ೨ | ೨ | ೪ | ೨ | ೩ | ೨ | ೨ | ೩ | ೩ | ೧ | ೨ | ೦ | ೨ | ೧ |
| ಸರ್ಪ | ೨ | ೨ | ೨ | ೪ | ೨ | ೧ | ೧ | ೨ | ೨ | ೨ | ೨ | ೨ | ೦ | ೨ |
| ಶ್ವಾನ | ೨ | ೨ | ೩ | ೨ | ೪ | ೨ | ೨ | ೩ | ೩ | ೧ | ೦ | ೨ | ೨ | ೧ |
| ಮಾರ್ಜಾರ | ೨ | ೨ | ೨ | ೧ | ೨ | ೪ | ೨ | ೨ | ೨ | ೧ | ೨ | ೨ | ೨ | ೧ |
| ಮೂಷಕ | ೨ | ೨ | ೨ | ೧ | ೨ | ೦ | ೪ | ೨ | ೨ | ೨ | ೨ | ೨ | ೨ | ೨ |
| ಗೋ | ೨ | ೨ | ೩ | ೨ | ೩ | ೨ | ೨ | ೪ | ೩ | ೦ | ೨ | ೨ | ೨ | ೧ |
| ಮಹಿಷಿ | ೦ | ೨ | ೩ | ೨ | ೩ | ೨ | ೨ | ೩ | ೪ | ೧ | ೨ | ೨ | ೨ | ೧ |
| ವ್ಯಾಘ್ರ | ೧ | ೧ | ೧ | ೨ | ೧ | ೧ | ೨ | ೦ | ೧ | ೪ | ೧ | ೧ | ೨ | ೧ |
| ಮೃಗ | ೨ | ೨ | ೨ | ೨ | ೦ | ೨ | ೨ | ೨ | ೨ | ೧ | ೪ | ೨ | ೨ | ೧ |
| ವಾನರ | ೨ | ೨ | ೦ | ೨ | ೨ | ೨ | ೨ | ೨ | ೨ | ೧ | ೨ | ೪ | ೨ | ೧ |
| ನಕುಲ | ೨ | ೨ | ೨ | ೦ | ೨ | ೨ | ೨ | ೨ | ೨ | ೨ | ೨ | ೨ | ೪ | ೨ |
| ಸಿಂಹ | ೧ | ೦ | ೧ | ೨ | ೧ | ೧ | ೧ | ೧ | ೧ | ೧ | ೧ | ೧ | ೨ | ೪ |

ಉಳಿದರೆ ಅಶುಭತಾರೆ ಎಂದು ತಿಳಿಯಬೇಕು. ಅರ್ಥಾತ್ ತಾರಾಬಲ ಇಲ್ಲ ವೆಂದು ತಿಳಿಯಬೇಕು.

(೨) ವರನ ನಕ್ಷತ್ರದಿಂದ ವಧುವಿನ ನಕ್ಷತ್ರದವರೆಗೆ ಎಣಿಸಿ ೯ ರಿಂದ ಭಾಗಿಸಬೇಕು: ಬಂದ ಶೇಷವು ೩ । ೫ । ೭ । ಆದರೆ ಅಶುಭ ಹಾಗೂ ಶೇಷವು ೦ । ೧ । ೨ । ४ । ೬ । ೮ । ಉಳಿದರೆ ಶುಭವೂ ಎಂದು ತಿಳಿಯ ಬೇಕು ಮೇಲೆ ಹೇಳಿದಂತೆ ಎರಡೂ ಪ್ರಕಾರ ನೋಡಿ ಶುಭ ಬಂದರೆ ೧ $\frac{೧}{೨}$ ಗುಣ ಹಿಡಿಯಬೇಕು. ಎರಡೂ ಅಶುಭ ಬಂದರೆ ೦ (ಶೂನ್ಯ) ಹಿಡಿಯ ಬೇಕು.

ಉದಾ :—ವಧುವಿನದು ಅಶ್ವಿನಿ ಎಂದು ತಿಳಿಯಿರಿ; ಹಾಗೂ ವರನದು ಪುಷ್ಯಾ ಎಂದು ತಿಳಿಯಿರಿ.

(೧) ಒಂದನೆಯ ಪದ್ಧತಿಯಂತೆ ಎಂದರೆ ವಧುವಿನ ನಕ್ಷತ್ರದಿಂದ ವರನ ನಕ್ಷತ್ರವು ಎಂಟು ಆಯಿತು. ಆದ್ದರಿಂದ ಇದು ಶುಭತಾರಾ.

(೨) ವರನ ನಕ್ಷತ್ರದಿಂದ ವಧುವಿನ ನಕ್ಷತ್ರವು ೨೧ ಆಯಿತು. ಇದಕ್ಕೆ ೯ ರಿಂದ ಭಾಗಿಸಲು ಶೇಷವು ೩ ಉಳಿಯುತ್ತದೆ. ಆದ್ದರಿಂದ ಇದು ಅಶುಭ ತಾರಾ; ಒಂದು ಶುಭ ಇನ್ನೊಂದು ಅಶುಭ; ಆದಕಾರಣ ೧ $\frac{೧}{೨}$ ಗುಣ ಹಿಡಿಯ ಯಲು ಬರುತ್ತದೆ. ಹೀಗೆ ತಾರಾವಿಚಾರ ಮಾಡಬೇಕು.

## ವಶ್ಯ ವಿಚಾರ

ಮಾನವ. ಜಲಚರ, ವನಚರ, ಕೀಟಕ, ಚತುಷ್ಪಾದ ಹೀಗೆ ರಾಶಿ ಗಳಿಗೆ ಸಂಜ್ಞೆ ಇರುತ್ತವೆ. ಹಾಗೂ ಅವುಗಳ ಒಂದೊಂದರ ವಶ್ಯ ಮತ್ತು ವೈರ ಹೀಗೆ ಇವುಗಳನ್ನು ಮುಂದಿನ ಪುಟದಲ್ಲಿ ಕೊಟ್ಟಿದೆ.

(೧) ಮೇಷ, ವೃಷಭ ಹಾಗೂ ಧನುರಾಶಿಯ ಉತ್ತರಾರ್ಧ ಮತ್ತು ಮಕರರಾಶಿಯ ಪೂರ್ವಾರ್ಧ ಈ ರಾಶಿಗಳಿಗೆ ಚತುಷ್ಪಾದವೆನ್ನುತ್ತಾರೆ.

(೨) ಮಿಥುನ, ಕನ್ಯಾ, ತುಲಾ, ಕುಂಭ ಮತ್ತು ಧನುರಾಶಿಯ ಪೂರ್ವಾರ್ಧ ಈ ರಾಶಿಗಳಿಗೆ ಮಾನವ ಎನ್ನುತ್ತಾರೆ.

(೫) ಕರ್ಕ, ಮೀನ ಮತ್ತು ಮಕರ ರಾಶಿಯ ಉತ್ತರಾರ್ಧ ಇವುಗಳಿಗೆ ಜಲಚರವೆನ್ನುತ್ತಾರೆ.

(೬) ಸಿಂಹರಾಶಿಗೆ ವನಚರ ಹಾಗೂ ವೃಶ್ಚಿಕಕ್ಕೆ ಕೀಟಕ ರಾಶಿ ಎನ್ನುತ್ತಾರೆ.

ವಧೂವರರದು ಒಂದೇ ಜಾತಿಯ ರಾಶಿ ಆದರೆ ಅದಕ್ಕೆ ೨ ಗುಣ ಇದರ ವಿರುದ್ಧ ಆದರೆ ೧ ಗುಣ.

### ವಶ್ಯಗುಣ ನೋಡುವ ಕೋಷ್ಟಕ

| | ಮಾನವ | ವನಚರ | ಕೀಟಕ | ಜಲಚರ | ಚತುಷ್ಪಾದ |
|---|---|---|---|---|---|
| ಮಾನವ | ೨ | ೦ | ೧ | ೧/೨ | ೧/೨ |
| ವನಚರ | ೦ | ೨ | ೦ | ೧/೨ | ೧/೨ |
| ಕೀಟಕ | ೧ | ೦ | ೨ | ೧ | ೧ |
| ಜಲಚರ | ೧/೨ | ೧/೨ | ೧ | ೨ | ೧ |
| ಚತುಷ್ಪಾದ | ೧/೨ | ೧/೨ | ೦ | ೧ | ೨ |

೧) ಉದಾ :—ವಧುವಿನದು ಮೇಷರಾಶಿ ಎಂದು ತಿಳಿಯಿರಿ—ಎಂದರೆ ಚತುಷ್ಪಾದ ಆಯಿತು.

೨) ವರನದು ಕರ್ಕರಾಶಿ ಎಂದು ತಿಳಿಯಿರಿ; ಎಂದರೆ ಜಲಚರ ರಾಶಿ ಆಯಿತು.

ಜಲಚರ-ಚತುಷ್ಪಾದಕ್ಕೆ ೧ ಗುಣ ಬರುತ್ತದೆ.

ಈ ವಶ್ಯಗಳಲ್ಲಿ ಎರಡು ಪ್ರಕಾರಗಳಿವೆ. ಒಂದಕ್ಕೆ ಸಾಮಾನ್ಯ ವೈರತ್ವ ಇರುತ್ತದೆ; ಇನ್ನೊಂದಕ್ಕೆ ಮಹಾವೈರತ್ವ ಇರುತ್ತದೆ. ಇದಕ್ಕೆ ೧/೨ ಗುಣ ಇದ್ದ

ಉದಾ :— ಜಲಚರ ಹಾಗೂ ವನಚರ ಇವುಗಳಿಗೆ ಮಹಾವೈರತ್ವ ಇದಕ್ಕೆ ೧ ಗುಣ. ಕೀಟಕ ಹಾಗೂ ಮಾನವ ಇವುಗಳಲ್ಲಿ ಸಾಮಾನ್ಯ ವೈರತ್ವ ಇದೆ. ಇದಕ್ಕೆ ಒಂದು ಗುಣ ಇದೆ.

## ವರ್ಣ ವಿಚಾರ

ಪ್ರತಿಯೊಂದು ರಾಶಿಗಳ ವರ್ಣಗಳಾವುವು ಎಂಬುದು ಈ ಹಿಂದೆ ವಿವರಿಸಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಹೀಗೆ ನಾಲ್ಕು ಪ್ರಕಾರಗಳಿವೆ. ಆಧಾರದ ವಧೂವರರ ಟಿಪ್ಪಣಿ ನೋಡುವಾಗ, ಅವರವರ ವರ್ಣಗಳಾವುವು ಎಂಬುದು ಮೊದಲು ನಿರ್ಧರಿಸಬೇಕು.

(೧) ವಧೂವರರು ಒಂದೇ ವರ್ಣ ಇದ್ದರೆ ಅತ್ಯುತ್ತಮವು; ಅದಕ್ಕೆ ೧ ಗುಣ.

(೨) ವರನದು ಉಚ್ಚ ವರ್ಣವಿದ್ದು ವಧುವಿನದು ನೀಚವರ್ಣವಾದರೂ ಅದಕ್ಕೆ ೧ ಗುಣ.

(೩) ವಧುವಿನದು ಉಚ್ಚ ವರ್ಣವಿದ್ದು, ವರನದು ನೀಚವಾದರೆ ಅದಕ್ಕೆ ಶೂನ್ಯ ಗುಣ.

ಉದಾ :—ವರನದು ವಿಪ್ರ ಇದ್ದು ಕನ್ಯೆಯ ವಧುವಿನದು ಯಾವುದೇ ವರ್ಣವಿದ್ದರೂ ೧ ಗುಣ.

ವಧುವಿನದು ವಿಪ್ರ ಎಂದು ತಿಳಿಯಿರಿ, ಅದಕ್ಕೆ ವಿಪ್ರವರ್ಣದ ವರನಿದ್ದರೆ ಮಾತ್ರ ೧ ಗುಣ; ಉಳಿದ ಯಾವುದೇ ವರ್ಣವಿದ್ದರೂ ಶೂನ್ಯ ಗುಣ ಬರುತ್ತದೆ.

## ೫ ಮಂಗಳ ವಿಚಾರ

ಪ್ರತಿಯೊಬ್ಬರ ಕುಂಡಲಿಯಲ್ಲಿ (ಜಾತಕದಲ್ಲಿ) ಕುಜ (ಮಂಗಳ) ಎಂಬ ಗ್ರಹ ಇದ್ದೇ ಇರುತ್ತದೆ. ಆದರೆ ಈ ಕುಜನು (ಮಂಗಳ) ಕೆಲವೊಂದು ಸ್ಥಾನದಲ್ಲಿದ್ದರೆ ಮಾತ್ರ ಕುಜದೋಷವಿದೆ—ಎಂದು ಹೇಳಬಹುದು. ಅರ್ಥಾತ್ 'ಕುಂಡಲಿಯಲ್ಲಿ ಮಂಗಳನಿದ್ದಾನೆ' ಎಂದು ಹೇಳಬಹುದು.

"ಲಗ್ನೇ ವ್ಯಯೇಚ ಪಾತಾಲೇ
ಜಾಮಿತ್ರೇ ಚಾಷ್ಟಮೇ ಕುಜೇ
ಕನ್ಯಾ ಹರತಿ ಭರ್ತಾರಂ
ಭರ್ತಾ ಹರತಿಕನ್ಯಕಾಮ್..."

ಹೀಗೆ ಮುಹೂರ್ತ ಗಣಪತಿಯಲ್ಲಿ ಹೇಳಿದೆ. ಇದರ ತಾತ್ಪರ್ಯ ಏನೆಂದರೆ—

ಲಗ್ನದಲ್ಲಿ, ಚತುರ್ಥಸ್ಥಾನದಲ್ಲಿ, ಸಪ್ತಮಸ್ಥಾನದಲ್ಲಿ, ಅಷ್ಟಮಸ್ಥಾನದಲ್ಲಿ, ವ್ಯಯಸ್ಥಾನದಲ್ಲಿ ಈ ಯಾವುದೇ ಐದು ಸ್ಥಾನಗಳಲ್ಲಿ ಕುಜನಿದ್ದರೆ ಅವನಿಗೆ ದೋಷ ಬರುವುದು. ಆದ್ದರಿಂದ ಅದಕ್ಕೆ ಕುಜದೋಷ ಎಂದು ಕರೆಯುತ್ತಾರೆ. ಹೀಗೆ ವಧುವಿನ ಕುಂಡಲಿಯಲ್ಲಿ ಕುಜದೋಷವಿದ್ದರೆ ವರನಿಗೆ ಅನಿಷ್ಟ ಹಾಗೂ ಮಾರಕವು; ವರನ ಕುಂಡಲಿಯಲ್ಲಿ ಕುಜದೋಷವಿದ್ದರೆ ವಧುವಿಗೆ ಅನಿಷ್ಟ ಹಾಗೂ ಮಾರಕವಾಗುತ್ತದೆ. ಆದ್ದರಿಂದ ಕುಜದೋಷ ಹೇಗೆ ಕಂಡುಹಿಡಿಯಬೇಕು ? ಎಂಬುದರ ಬಗ್ಗೆ ಒಂದು ಉದಾಹರಣೆ ಈ ಕೆಳಗೆ ಕೊಟ್ಟಿದೆ.

**ಕುಜದೋಷದ ಕುಂಡಲಿ**



ಮೇಲೆ ಗುಣಿಸಿ ಹಾಕಿದ ಯಾವುದೇ ಐದು ಸ್ಥಳಗಳಲ್ಲಿ ಮಂಗಳ ನಿದ್ದರೆ, ಕುಜದೋಷವೇದು ಹೇಳಬಹುದು. ಆದ್ದರಿಂದ ಕುಜದೋಷವಿದ್ದ ವರನೊಂದಿಗೆ ಕುಜದೋಷವಿದ್ದ ವಧುವಿನ ಅಥವಾ ಕುಜದೋಷವಿದ್ದ ವಧುವಿನೊಂದಿಗೆ ಕುಜದೋಷವಿದ್ದ ವರನ ವಿವಾಹ ಮಾಡಬೇಕು. ವಧೂವರರಲ್ಲಿ ಒಬ್ಬರಿಗೆ ಕುಜದೋಷವಿದ್ದರೆ ವಿವಾಹವನ್ನು ಸರ್ವಥಾ ಮಾಡಬಾರದು.

ಕುಜನು ತಾನು ಇರುವ ಸ್ಥಾನದಿಂದ ೪-೭-೮ ಈ ಸ್ಥಾನಗಳನ್ನು ಯಾವಾಗಲೂ ನೋಡುತ್ತಾನೆ. (ದೃಷ್ಟಿ ಇರುತ್ತದೆ) ವಧೂವರರ ಕುಂಡಲಿಯಲ್ಲಿ ಸಪ್ತಮಸ್ಥಾನವು ಮುಖ್ಯವಿರುತ್ತದೆ. ಏಕೆಂದರೆ ವರನ ಕುಂಡಲಿಯಲ್ಲಿ ಸಪ್ತಮಸ್ಥಾನವು ಜಾಯಾಸ್ಥಾನವೂ ವಧುವಿನ ಕುಂಡಲಿಯಲ್ಲಿ ಸಪ್ತಮಸ್ಥಾನವು ಪತಿಯ ಸ್ಥಾನವು ಅಲ್ಲಿ ಕುಜನಿದ್ದರೆ ಪತಿಪತ್ನಿಯರಿಗೆ ಸೌಖ್ಯ ಸಿಗಲಾರದು ಮತ್ತು ಅಲ್ಲಿ ಕುಜನಿದ್ದರೆ ಲಗ್ನದ ಮೇಲೆ ಪೂರ್ಣ ದೃಷ್ಟಿ ಇದ್ದಂತಾಗುವದು. ಆದ್ದರಿಂದ ಆ ಕುಜನು ದೋಷಯುಕ್ತನೆಂದು ಎಣಿಸಲಾಗುತ್ತದೆ.

'ಲಗ್ನ' ಇದಕ್ಕೆ ತನುಸ್ಥಾನವೆನ್ನುವರು. ತನುಸ್ಥಾನವು ದೇಹಸ್ಥಿತಿಯನ್ನು ಹೇಳುತ್ತದೆ. ಈ ಸ್ಥಾನದಲ್ಲಿ ಕುಜದೋಷವಿದ್ದರೆ ದೇಹದ ಮೇಲೆ ಪರಿಣಾಮವು ಆಗುವುದು ಮತ್ತು ಲಗ್ನದಲ್ಲಿರುವ ಕುಜನ ದೃಷ್ಟಿಯು ಸಂಪೂರ್ಣ ಸಪ್ತಮದ ಮೇಲೆ ಇರುತ್ತದೆ. ಆದ್ದರಿಂದ ಪತಿಗೆ ಅಥವಾ ಪತ್ನಿಗೆ ಕುಜನು ಮಾರಕವಾಗುತ್ತಾನೆ. ಮತ್ತು ಲಗ್ನದಲ್ಲಿದ್ದ ಕುಜನ ದೃಷ್ಟಿಯು ಚತುರ್ಥಸ್ಥಾನದ ಮೇಲೆ ಸಹ ಬೀಳುತ್ತದೆ. ಚತುರ್ಥಸ್ಥಾನ ಇದು ಮಾತೃಸ್ಥಾನ ಇರುವದರಿಂದ, ಲಗ್ನದಲ್ಲಿದ್ದ ಕುಜನು ಮಾತೃಮಾರಕನಾಗುತ್ತಾನೆ. ಲಗ್ನದಲ್ಲಿದ್ದ ಕುಜನ ದೃಷ್ಟಿ ಅಷ್ಟಮಸ್ಥಾನದಲ್ಲಿಯೂ ಇರುತ್ತದೆ. ಅಷ್ಟಮಸ್ಥಾನವು ರೋಗೋತ್ಪತ್ತಿಯ ಸ್ಥಾನವು. ಈ ಸ್ಥಾನದಲ್ಲಿಯೂ ಕುಜನ ದೃಷ್ಟಿ ಇದ್ದ ಕಾರಣ, ಸ್ವಂತಕ್ಕೆ ಸಹ ಮಾರಕನಾಗುವನು. ಎಂದರೆ ಲಗ್ನದಲ್ಲಿ ಕುಜನಿದ್ದರೆ ಅರ್ಥಾತ್ ಕುಜದೋಷ ಲಗ್ನದಲ್ಲಿದ್ದರೆ ಪತಿಗೆ ಅಥವಾ ಪತ್ನಿಗೆ ಮಾರಕ, ಮಾತೃಮಾರಕ ಹಾಗೂ ಸ್ವಂತಕ್ಕೆ ಮಾರಕ-ಹೀಗೆ

ಮೂವರಿಗೂ ಮಾರಕನಾಗುವುದರಿಂದ, ಲಗ್ನದಲ್ಲಿದ್ದ ಕುಜದೋಷವನ್ನು ವಿಶೇಷವಾಗಿ ಪರಿಶೀಲಿಸಬೇಕು.

**ವ್ಯಯಸ್ಥಾನ**–ಇದರಿಂದ ಶಯ್ಯಾಸುಖ (ನಿದ್ರೆ) ಹಾಗೂ ಅನೇಕ ತರಹದ ಗಂಡಾಂತರ, ಕಾರಾಶಿಕ್ಷಾ, ಜೇಲು, ದಂಡ, ನಿದ್ರಾಭಂಗ ಈ ಎಲ್ಲ ವಿಷಯಗಳ ವಿಚಾರ ಮಾಡಬೇಕಾಗುವದು. ಕುಜದೋಷ ಈ ಸ್ಥಾನದಲ್ಲಿದ್ದರೆ, ಪತಿ ಅಥವಾ ಪತ್ನಿಗೆ ಮೇಲೆ ಹೇಳಿದ ಸಂಗತಿಗಳನ್ನು ಅನುಭವಿಸಬೇಕಾಗುವದು. ಹಾಗೂ ವ್ಯಯಸ್ಥಾನದಲ್ಲಿದ್ದ ಕುಜನ ದೃಷ್ಟಿ ಜಾಯಾ ಅಥವಾ ಪತಿಯ ಸ್ಥಾನದ ಮೇಲೆ ಇರುತ್ತದೆ ಆದ್ದರಿಂದ ವ್ಯಯಸ್ಥಾನದಲ್ಲಿರುವ ಕುಜನು ಪತಿ ಅಥವಾ ಪತ್ನಿಗೆ ಮಾರಕನಾಗುತ್ತಾನೆ. ಮಾತ್ರ ವ್ಯಯಸ್ಥಾನದಲ್ಲಿದ್ದ ಅದೇ ಕುಜನ ದೃಷ್ಟಿಯು ತೃತೀಯ ಸ್ಥಾನದಲ್ಲಿ ಬೀಳುವದರಿಂದ ಸೋದರರಿಗೆ ತೊಂದರೆದಾಯಕವೂ ಷಷ್ಠ ಸ್ಥಾನದಲ್ಲಿರುವ ದೃಷ್ಟಿಯು ಇರುವ ಕಾರಣ ಶತ್ರುಯು ಕಡೆಯವರಿಗೆ ಕಷ್ಟಕರವೂ ಇರುವ ಕಾರಣ–ವ್ಯಯಸ್ಥಾನದಲ್ಲಿರುವ ಕುಜನ ದೋಷವನ್ನು ಪರಿಶೀಲಿಸಬೇಕು.

**ಚತುರ್ಥಸ್ಥಾನವು**– ಮಾತೃಸ್ಥಾನ ಎಂಬುದನ್ನು ಹಿಂದೆ ಹೇಳಿದೆ. ಚತುರ್ಥಸ್ಥಾನದಲ್ಲಿ ದೋಷೀಕುಜನು ಮಾತೃವಿಗೆ ಮಾರಕನಾಗುವನು. ಅಲ್ಲದೆ ಸಪ್ತಮಸ್ಥಾನದಲ್ಲಿ ಅವನ ದೃಷ್ಟಿ ಇರುವ ಕಾರಣ, ಪತಿಗೆ ಅಥವಾ ಪತ್ನಿಗೆ ಮಾರಕನೂ ಆಗುವನು. ಚತುರ್ಥಸ್ಥಾನದಲ್ಲಿದ್ದ ಕುಜನ ದೃಷ್ಟಿಯು ದಶಮದಲ್ಲಿ ಪೂರ್ಣ ಇರುತ್ತದೆ. ದಶಮಸ್ಥಾನವು ಕುಂಡಲಿಯಲ್ಲಿ ಪಿತೃಸ್ಥಾನವು. ದಶಮದ ಮೇಲೆ ಕುಜದೃಷ್ಟಿ ಇರುವದರಿಂದ, ಪಿತೃ ಮಾರಕನೂ ಆಗುವನು. ಮಾತೃ, ಪಿತೃ, ಜಾಯಾ ಅಥವಾ ಭರ್ತಾ ಹೀಗೆ ಮೂವರಿಗೂ ಮಾರಕನಾಗುವದರಿಂದ, ಚತುರ್ಥಸ್ಥಾನದಲ್ಲಿಯ ಕುಜದೋಷವನ್ನು ಸಹ ಪರಿಶೀಲಿಸಬೇಕು.

**ಅಷ್ಟಮಸ್ಥಾನ**–ಇದು ಮೃತ್ಯುಸ್ಥಾನವು. ಈ ಸ್ಥಾನದಲ್ಲಿದ್ದ ದೋಷೀ ಕುಜನು ಮಾರಕನಾಗುತ್ತಾನೆ. ಆದ್ದರಿಂದ ಈ ಕುಜನನ್ನು ವಿಶೇಷವಾಗಿ ಪರಿಶೀಲಿಸಬೇಕು. ಹೀಗೆ ಮೇಲೆ ಹೇಳಿದ ಐದು ಸ್ಥಳಗಳಲ್ಲಿ ದೋಷಯುಕ್ತ ಕುಜನಿದ್ದರೆ ಅದರ ವಿಚಾರ ಮಾಡಬೇಕು. ಹಾಗೂ ಅದರ ವಿಚಾರ

ಮಾಡುವಾಗ ಒಂದು ಸಂಗತಿಯನ್ನು ಮಾತ್ರ ಲಕ್ಷ್ಯದಲ್ಲಿಡಬೇಕು. ಅದೇನೆಂದರೆ ಕುಜದೋಷವಿದೆಯೋ ಇಲ್ಲವೋ ಎಂಬುದನ್ನು ಪರಿಶೀಲಿಸುವಾಗ, ದುರ್ಲಕ್ಷ್ಯ ಮಾಡಬಾರದು ಹಾಗೂ ಜನ್ಮಕುಂಡಲಿ ಸರಿಯಾಗಿ ಇದೆಯೋ ಇಲ್ಲವೋ ಅಥವಾ ಜನ್ಮಲಗ್ನ ಸರಿಯಾಗಿ ಇದೆಯೋ ಇಲ್ಲವೋ ಎಂಬುದನ್ನು ವಿಶೇಷವಾಗಿ ನೋಡಬೇಕು. ಏಕೆಂದರೆ ಜನ್ಮಕಾಲದ ೧೧-೧೫ ನಿಮಿಷದ ಅಂತರವಿದ್ದರೆ, ಲಗ್ನ ಬೇರೆ ಬೇರೆಯಾಗಿರುತ್ತದೆ.

ಸಂದಿಗ್ಧ ಲಗ್ನದಲ್ಲಿ ಮುಂದಿನ ಲಗ್ನವನ್ನು ಪರಿಗಣಿಸಬೇಕು. ಅದ್ದರಿಂದ ಕುಜದೋಷ ನೋಡುವ ಪೂರ್ವದಲ್ಲಿ ಜನ್ಮಲಗ್ನವನ್ನು ಪುನಃ ಪುನಃ ಪರಿಶೀಲಿಸಬೇಕೆಂದು ಮತ್ತೊಮ್ಮೆ ಹೇಳಬಯಸುವೆ.

ರವಿ, ಶನಿ, ಮಂಗಳ, ರಾಹು ಇವರು ಉಗ್ರಗ್ರಹಗಳಿದ್ದು, ಇವರ ಪರಿಣಾಮವೂ ಉಗ್ರವಾಗಿಯೇ ಇದೆಯೆಂಬುದು ಎಲ್ಲರಿಗೂ ಗೊತ್ತಿರಬಹುದು. ಅದರಲ್ಲಿಯೂ ಮಂಗಳ ಹಾಗೂ ರಾಹು ಇವರ ದುಷ್ಪರಿಣಾಮವು ತೀವ್ರವಾಗಿ ಆಗುತ್ತವೆ. ರವಿ ಹಾಗೂ ಶನಿ ಇವರ ದುಷ್ಪರಿಣಾಮವು ಮಂದವಾಗಿರುತ್ತದೆ.

ವಧುವಿನ ಅಥವಾ ವರನ ಕುಂಡಲಿಯಲ್ಲಿ ಕುಜದೋಷವಿದೆ ಎಂದು ತಿಳಿದ ಮೇಲೆ, ಅಥವಾ ಹಿಂದೆ ಹೇಳಿದ ಐದು ಸ್ಥಳಗಳಲ್ಲಿ ದೋಷೀ ಕುಜನಿದ್ದರೆ, ಇನ್ನೊಂದು ಕುಂಡಲಿಯಲ್ಲಿ ಶನಿ, ರಾಹು, ರವಿ ಇವರಲ್ಲಿ ಯಾರಾದರೂ ಒಬ್ಬನಿದ್ದರೆ ಕುಜದೋಷವು ಅಲ್ಪ ಕಡಿಮೆ ಆಗುವದು ಎಂದು ತಿಳಿಯಬೇಕು. ದೋಷೀ ಮಂಗಳನು ಶನಿ ರಾಹು, ರವಿಗಳಂತಹ ಪಾಪ ಗ್ರಹಗಳೊಂದಿಗೆ (ಯುತಿ) ಇದ್ದರೆ, ಅವನ ಕ್ರೂರತ್ವ ಕಡಿಮೆಯಾಗುವದು. ಹೇಗೆಂದರೆ ಇಬ್ಬರು ಸಮಬಲವೀರರು (ಯೋಧರು) ಅಥವಾ ವಿದ್ವಾಂಸರು ಒಂದೇ ಸ್ಥಳದಲ್ಲಿ ಕೂಡಿದರೆ ಒಬ್ಬರಿಗೊಬ್ಬರ ವೈರತ್ವವು ಬಹುಮಟ್ಟಿಗೆ ಕಡಿಮೆ ಆಗುತ್ತದೆ. (ಒಬ್ಬರಿಗೊಬ್ಬರ ಆಟ ನಡೆಯಲಾರದು) ಒಬ್ಬನೇ ಇದ್ದರೆ ಅವನದೇ ಶಕ್ತಿ, ಅವನದೇ ಕ್ರೂರತ್ವ ಇರುತ್ತದೆ. ಅದ್ದರಿಂದ ವಧೂವರರ ಕುಂಡಲಿಯಲ್ಲಿ ಒಬ್ಬರಿಗೆ ಮಂಗಳನಿದ್ದರೆ ಅಷ್ಟೇ ಬಲವಂತನಾದ ಶನಿ ಅಥವಾ ರಾಹು ಬೇರೊಬ್ಬರ ಕುಂಡಲಿಯಲ್ಲಿದ್ದರೆ, ಮಂಗಳನ ಕ್ರೂರತ್ವ ಕಡಿಮೆ ಆಗುತ್ತದೆ.

ಇನ್ನೊಂದು ಮುಖ್ಯ ಸಂಗತಿ ಎಂದರೆ ಕುಂಡಲಿಯಲ್ಲಿ ದೋಷೀ ಕುಜನೆಂದು ಹೇಳಲಾಗುವ ಕುಜನು ಧನಿಷ್ಠಾ, ಮೂಲಾ, ಜೇಷ್ಠಾ, ವಿಶಾಖಾ ಮಘಾ, ಆಶ್ಲೇಷಾ, ಆರಿದ್ರಾ, ಕೃತ್ತಿಕಾ, ಭರಣಿ, ಪೂರ್ವಾಷಾಢಾ, ಪೂರ್ವಾ ಹಾಗೂ ಪೂರ್ವಾಭಾದ್ರಪದಾ, ಈ ನಕ್ಷತ್ರಗಳಲ್ಲಿ ಜನ್ಮ ಸಮಯಕ್ಕೆ ಇದ್ದುದಾದರೆ ವಿಶೇಷ ಅನಿಷ್ಟ ಫಲ ಇರುತ್ತದೆ. ಇತರ ನಕ್ಷತ್ರಗಳಲ್ಲಿ ಇದ್ದು ೧ । ೪ । ೭ । ೮ । ೧೨ ಈ ಸ್ಥಾನದಲ್ಲಿದ್ದರೂ, ಅಷ್ಟು ಅನಿಷ್ಟದಾಯಕನಾಗುವದಿಲ್ಲ. ಮೇಷ, ಕರ್ಕ, ಸಿಂಹ, ವೃಶ್ಚಿಕ ಧನು, ಮಕರ ಈ ರಾಶಿಯಲ್ಲಿ ಕುಜನು ಜನ್ಮ ಕಾಲದಲ್ಲಿದ್ದು, ಹಿಂದೆ ಹೇಳಿದ ಯಾವುದೇ ೫ ಸ್ಥಾನದಲ್ಲಿದ್ದರೂ ಬಹಳ ಅನಿಷ್ಟದಾಯಕನು ಆಗುವನು. ಆದ್ದರಿಂದ ವಧೂವರರ ಜನ್ಮ ಟಿಪ್ಪಣ ತಥಾ ಜನ್ಮ ಕುಂಡಲಿ ಪರಿಶೀಲಿಸುವಾಗ ಕುಜದೋಷದ ಬಗ್ಗೆ ವಿಶೇಷ ಗಮನವೀಯಬೇಕು. ಕೆಲವೊಂದು ನಿಯಮದಂತೆ ಕುಂಡಲಿಯಲ್ಲಿ ಕುಜದೋಷ ಆಗುವದಿಲ್ಲ. ಅರ್ಥಾತ್ ಕುಜನು ಮಾರಕನಾಗುವುದಿಲ್ಲ. ಇದರ ನಿಯಮಗಳನ್ನು ಈ ಕೆಳಗೆ ಕೊಟ್ಟಿದೆ :—

(೧) ಗುರುವಾಗಲಿ ಶುಕ್ರನಾಗಲಿ ಬಲಾಢ್ಯನಿದ್ದು, ಲಗ್ನದಲ್ಲಿ ಅಥವಾ ಸಪ್ತಮದಲ್ಲಿದ್ದರೆ, ಕುಜದೋಷ ತಗಲುವುದಿಲ್ಲ.

(೨) ಮಂಗಳನು ನೀಚರಾಶೀ, ವಕ್ರಿ, ಶತ್ರುಕ್ಷೇತ್ರೀ, ಅಸ್ತಂಗತ ಹೀಗಿದ್ದುದಾದರೆ ಕುಜ ದೋಷವೆ ಇರುವುದಿಲ್ಲ.

(೩) ವಧೂವರರ ರಾಶಿ ಮಿತ್ರರೀವ ಕೂಡಿದ್ದು, ಒಂದೇ ಗಣವಿದ್ದು ೨೭ ಕ್ಕಿಂತ ಗುಣಗಳು ಹೆಚ್ಚಿಗೆ ಇದ್ದರೆ, ಕುಜದೋಷ ಕಡಿಮೆಯಾಗುವದು

(೪) ಲಗ್ನ ಚತುರ್ಥ, ಸಪ್ತಮ, ಅಷ್ಟಮ, ದ್ವಾದಶ ಸ್ಥಾನದಲ್ಲಿ ಬಲಾಢ್ಯ ಶನಿ ಇದ್ದರೆ ಕುಜದೋಷ ಆಗುವುದಿಲ್ಲ.

(೫) ಲಗ್ನದಲ್ಲಿ ಅಥವಾ ಸಪ್ತಮದಲ್ಲಿ ಬಲಾಢ್ಯ ಗುರು ಚಂದ್ರರ ಯುತಿ ದ್ದರೆ ಕುಜದೋಷವಾಗುವುದಿಲ್ಲ.

(೬) ಕರ್ಕ ಹಾಗೂ ಸಿಂಹ ಲಗ್ನವಿದ್ದರೆ ಕುಜದೋಷ ಆಗುವದಿಲ್ಲ ವೆಂದು ಕೆಲವರ ಮತವಿದೆ.

ಹೀಗೆ ದೋಷಯುಕ್ತ ಮಂಗಳನ ಅಪವಾದಗಳನ್ನು ಹೇಳಿದೆ. ಅದರಂತೆ ನೋಡುವದು ವಿಹಿತ: ಆದರೆ ದೋಷಯುಕ್ತವೆಂದು ಯಾವ ಸ್ಥಾ

ಗಳನ್ನು ಹೇಳಿದೆಯೋ, ಆ ಸ್ಥಾನಗಳಲ್ಲಿ ಕುಜನು ನಿರ್ಬಲ ಅಸ್ತ, ವಕ್ರಿ, ವೃದ್ಧಾವಸ್ಥೆ, ಶುಭಗ್ರಹಗಳಿಂದ ಪೂರ್ಣ ದೃಷ್ಟಿಯನ್ನು ಹೊಂದಿದ್ದರೆ ಅವನು ಅಶುಭದಾಯಕನು ಆಗಲಾರನು. ಮತ್ತು ಲಗ್ನಾಧಿಪತಿ ಸಪ್ತಮಾಧಿಪತಿ ಶುಭಗ್ರಹಗಳಿದ್ದು, ಗುರು, ಚಂದ್ರ, ಶುಕ್ರರೊಂದಿಗೆ ಬಲವಂತನಾಗಿದ್ದರೆ ಕುಜ ದೋಷವು ಕಡಿಮೆಯಾಗುವದು. ಆದರೆ ಅದೇ ಕುಜನು ಕ್ರೂರ ನಕ್ಷತ್ರ ಗಳಿಂದ ಬಲವಂತನಿದ್ದು ಪಾಪಗ್ರಹದಿಂದ ಯುಕ್ತನಿದ್ದರೆ, ಅಥವಾ ಅವುಗಳ ದೃಷ್ಟಿ ಇದ್ದರೆ, ಖಚಿತವಾಗಿ ಅಶುಭದಾಯಕನು ಆಗುವನು. ಆದ್ದರಿಂದ ಕುಜದೋಷದ ಬಗ್ಗೆ ಸೂಕ್ಷ್ಮವಾಗಿ ಪರಿಶೀಲಿಸಬೇಕು. ಜ್ಯೋತಿಷಿಗಳು ಲಗ್ನಕುಂಡಲಿಯಲ್ಲಿ ಕುಜನ ಸ್ಥಾನವನ್ನು ಸಂಪೂರ್ಣ ಅಭ್ಯಸಿಸಬೇಕು ಹಾಗೂ ಲಗ್ನವನ್ನು ಸರಿಯಾಗಿ ಹಾಕಬೇಕು.

## ಅಂಗವಿಭಾಗ

ವಧೂವರರ ಕುಂಡಲಿಯಿಂದ ಶರೀರದ ಯಾವ ಯಾವ ಭಾಗಗಳು ಹೇಗಿವೆ ಅಥವಾ ಯಾವ ಯಾವ ಭಾಗಗಳು ಹೀನವಿವೆ ಎಂಬುದನ್ನು ಹೇಗೆ ಕಂಡುಹಿಡಿಯಬೇಕು ? ಇದನ್ನು ಈ ಪ್ರಕರಣದಲ್ಲಿ ವಿವರಿಸಿದೆ:—

## ಮೇಷಾದಿ ರಾಶಿಗಳ ಅಂಗವಿಭಾಗ

ಮೇಷ—ತಲೆ. ವೃಷಭ—ಮುಖ. ಮಿಥುನ—ವಕ್ಷಸ್ಥಳ. ಕರ್ಕ—ಹೃದಯ, ಸಿಂಹ—ಉದರ, ಕನ್ಯಾ—ಕಟಿ, ತುಲಾ—ನಾಭಿಯ ಕೆಳಭಾಗ, ವೃಶ್ಚಿಕ—ಲಿಂಗ (ಯೋನಿ), ಧನು—ತೊಡೆ, ಮಕರ—ಜಾನು, ಕುಂಭ—ಜಂಘೆ, ಮೀನ—ಪಾದ.

## ದ್ವಾದಶ ರಾಶಿಗಳ ಅಂಗವಿಭಾಗ

ಮೇಷಾದಿ ರಾಶಿಗಳ ಅಂಗ ವಿಭಾಗಗಳನ್ನು ವಿವರಿಸಿದೆ. ಇನ್ನು ಆ ಸ್ಥಾನಗಳ ಅಂಗ ವಿಭಾಗಗಳನ್ನು ಹೇಳುತ್ತೇವೆ–ಜನ್ಮಲಗ್ನ (ತನು) ಶಿರಸ್ಸು, ದ್ವಿತಿಯ - ಮುಖ; ತೃತೀಯ—ಎದೆ, ವೃಕ್ಷಸ್ಥಳ, ಚತುರ್ಥ—ಹೃದಯ; ಪಂಚಮ–ಹೊಟ್ಟೆ, ಷಷ್ಠ–ಕಟಿಪ್ರದೇಶ, ನಡು, ಸಪ್ತಮ–ಬಸ್ತಿ, ಅಷ್ಟಮ–ಲಿಂಗ, ಯೋನಿ, ನವಮ–ವೃಷಣ, ದಶಮ–ತೊಡೆ, ಏಕಾದಶ–ಮೊಣಕಾಲು.

ದ್ವಾದಶ—ಅಡಿಗಳು. ಹೀಗೆ ದ್ವಾದಶ ರಾಶಿಸ್ಥಾನಗಳಿಂದ ಶರೀರದ ಭಾಗ ಗಳು ಹೇಗಿವೆಯೆಂಬುದನ್ನು ತಿಳಿದುಕೊಳ್ಳಬೇಕು. ಹಾಗೂ ಆ ರಾಶಿಗಳ ಬಲಾಬಲ, ಗ್ರಹಗಳ ಬಲಾಬಲ ನವಾಂಶದಲ್ಲಿಯು ಬಲಾಬಲ ಇವುಗಳಿಂದ ವಧೂವರರ ಅವಯುವಗಳ ದೋಷವನ್ನು ತಿಳಿಯಬಹುದು.

## ದ್ರೇಷ್ಕಾಣರೀತಿಯ ಅಂಗವಿಭಾಗ

ಅಂಗವಿಭಾಗಗಳನ್ನು ದ್ರೇಷ್ಕಾಣ ವಿಭಾಗದಿಂದ ನೋಡುವುದು ಹೆಚ್ಚು ವಿಹಿತ. ಅದನ್ನು ದ್ರೇಷ್ಕಾಣ ಪದ್ಧತಿಯಂತೆ ಈ ಕೆಳಗೆ ಕೊಡಲಾಗಿದೆ.

ಲಗ್ನ :—ತಲೆ. ಮಸ್ತಕ, ಕಂಠ, ಶಿರಸ್ಸು.

ದ್ವಿತಿಯ :—ಕಣ್ಣು (ಬಲಗಣ್ಣು), ಮಾತು, ಬಲಭುಜ, ಬಲಗೈ.

ತೃತೀಯಸ್ಥಾನ :—ಬಲಕಿವಿ, ಬಲಬಾಹು, ಬಲಗಡೆಯ ವೃಷಣ ಎದೆ.

ಚತುರ್ಥಸ್ಥಾನ :—ಹೃದಯ, ಬಲಪಕ್ಕೆ, ಬಲತೊಡೆ. ಮೂಗಿನಹೊಳ್ಳೆ.

ಪಂಚಮಸ್ಥಾನ :—ಹೊಟ್ಟೆ, ಬಲಗಲ್ಲ, ಬಲಮೊಳಕಾಲು.

ಷಷ್ಠಸ್ಥಾನ :—ಟೊಂಕ. ಬಲದವಡೆ, ಬಲಪಕ್ಕೆ.

ಸಪ್ತಮಸ್ಥಾನ :—ಹೊಕ್ಕಳ (ನಾಭಿ , ನಾಭಿಯ ಕೆಳಭಾಗ )

ಅಷ್ಟಮಸ್ಥಾನ :—ಗುಹ್ಯ. ಎಡದವಡೆ, ಎದೆ. ಶಿಗ.

ನವಮಸ್ಥಾನ :—ಎಡಗಲ್ಲ. ಎಡಭಾಗದ ಹೃದಯ.

ದಶಮಸ್ಥಾನ :—ಎಡಮೂಗಿನ ಹೊಳ್ಳೆ, ಎಡತೊಡೆ. ಎಡಪಕ್ಕ.

ಏಕಾದಶಸ್ಥಾನ :— ಎಡಕಿವಿ, ಎಡಗೈ, ಎಡಬಾಹು, ಎಡಗಡೆಯ ವೃಷಣ.

ದ್ವಾದಶಸ್ಥಾನ :—ಕಾಲುಗಳು. ಎಡಗಣ್ಣು. ಎಡಭುಜ.

## ದ್ವಾದಶಸ್ಥಾನಗಳ ಭಾವ

ಯಾವುದೇ ವ್ಯಕ್ತಿಯ ಜನ್ಮ ಕುಂಡಲಿಯಲ್ಲಿಯ ಬೇರೆ ಬೇರೆ ಸ್ಥಾನ ಗಳಿಂದ ಅನೇಕ ಸಂಗತಿಗಳು ತಿಳಿಯುತ್ತವೆ. ಅವನ್ನು ಆ ಆ ಸ್ಥಾನಗಳಿಂದ ಹೇಗೆ ಕಂಡುಹಿಡಿಯಬೇಕು ಎಂಬುದನ್ನು ಈ ಮುಂದೆ ಕೊಡಲಾಗಿದೆ.

ಪ್ರಥಮ (ತನು) :— ಶರೀರಸುಖ, ಆರೋಗ್ಯ, ರೂಪ, ವರ್ಣ ಅವರೊಳಗೆ ಮಸ್ತಕ (ತಲೆ). ಶರೀರದ ಕೃಶ ಅಥವಾ ಸ್ಥೂಲ, ಆಚರಣೆ, ಆಯುಷ್ಯ ಸ್ವಭಾವ, ಧೋರಣೆ, ಇಚ್ಛೆ ಮಹತ್ವಾಕಾಂಕ್ಷೆ, ಮನಸ್ಸಿನ ಸ್ಥಿರತ್ವ ಸ್ವಭಾವ, ಆಯುಷ್ಯ, ಸಶಕ್ತ-ಅಶಕ್ತ, ಎತ್ತರ–ಗಿಡ್ಡ ಈ ಎಲ್ಲ ಸಂಗತಿಗಳನ್ನು ನೋಡಬೇಕಾಗುತ್ತದೆ.

**ಧನಸ್ಥಾನ**–ಎಂದರೆ ಕುಂಡಲಿಯಲ್ಲಿಯ ದ್ವಿತೀಯ ಸ್ಥಾನ. ಈ ಸ್ಥಾನಗಳ ಮೇಲಿಂದ ಈ ಕೆಳಗಿನ ಸಂಗತಿಗಳನ್ನು ವಿಚಾರಿಸಬೇಕು.

ಸಾಂಪತ್ತಿಕ ಸ್ಥಿತಿ, ದ್ರವ್ಯಸಂಗ್ರಹ, ಕೌಟುಂಬಿಕ ಸುಖ, ಆಪ್ತವರ್ಗ, ರತ್ನ–ಸುವರ್ಣಾದಿಗಳು, ನೇತ್ರದೋಷ, ಪೂರ್ವಾರ್ಜಿತ ದ್ರವ್ಯಲಾಭ, ಕಣ್ಣು, ಕಂಠ, ಗಲ್ಲ, ವಾಕ್‌ಸಿದ್ಧಿ ಇತ್ಯಾದಿ ಸಂಗತಿಗಳನ್ನು ನೋಡಬೇಕಾಗುವದು.

ಸಹಜಸ್ಥಾನ ಎಂದರೆ ಕುಂಡಲಿಯಲ್ಲಿಯ ತೃತೀಯ ಸ್ಥಾನವು. ಈ ಸ್ಥಾನದ ಮೇಲಿಂದ ಈ ಕೆಳಗಿನ ಸಂಗತಿಗಳನ್ನು ನೋಡಬೇಕು.

ಸಹೋದರ, ವಿಚಾರ, ನೌಕರ–ಚಾಕರರು, ಸಾಹಸ, ಪರಾಕ್ರಮ, ಔಷಧಿ, ರಸಾಯನ ಮಾಹಿತಿ, ಮಹತ್ವಾಕಾಂಕ್ಷೆ, ಹಸ್ತಾಕ್ಷರ, ಯಾವ ಪದಾರ್ಥಗಳು ರುಚಿಸುವವು.

**ಸುಖಸ್ಥಾನ** –ಕುಂಡಲಿಯಲ್ಲಿಯ ಚತುರ್ಥಸ್ಥಾನಕ್ಕೆ ಸುಖಸ್ಥಾನ ಎನ್ನುತ್ತಾರೆ. ಈ ಸ್ಥಾನದಿಂದ ಈ ಕೆಳಗಿನ ಸಂಗತಿಗಳನ್ನು ನೋಡಬೇಕು

ಜಮೀನ್, ಜಾಮೀಲಾ, ಸ್ಥಾವರ, ಇಸ್ಟೇಟು, ಕಪಟೀ ಅಥವಾ ನಿಷ್ಕಪಟ ಸ್ವಭಾವ, ವಾಹನಸೌಖ್ಯ, ನಿದ್ರಾಸುಖ, ಆಪ್ತವರ್ಗ, ಮಾತೃಸೌಖ್ಯ ಪೂರ್ವಾರ್ಜಿತ ಆಸ್ತಿ, ಗೃಹಸೌಖ್ಯ ಇತ್ಯಾದಿಗಳು.

**ಸಂತತಸ್ಥಾನ** :—ಕುಂಡಲಿಯಲ್ಲಿಯ ಪಂಚಮಸ್ಥಾನಕ್ಕೆ ಸುತಸ್ಥಾನ ಎನ್ನುತ್ತಾರೆ. ಈ ಸ್ಥಾನದ ಮೇಲಿಂದ ಕೆಳಗಿನ ಸಂಗತಿಗಳನ್ನು ನೋಡಬೇಕು—

ಕನ್ಯಾ ಅಥವಾ ಪುತ್ರ ಸಂತತಿ, ಸಂತತಿಯಿಂದ ಸುಖ, ವ್ಯಕ್ತಿಯ ಬಣ್ಣ, ರೂಪ, ಸ್ವಭಾವ, ವಿದ್ಯಾ, ಹಾಗೂ ಮಾನ- ಸನ್ಮಾನ ಅನೇಕ ರೀತಿಯ ಕಲೆ, ಮಂತ್ರ–ಯಂತ್ರಕಾರ್ಯಗಳ ವಿದ್ಯಾನಿಪುಣತೆ, ದೇವತಾನುಕೂಲ ಗ್ರಂಥಕರ್ತೃತ್ವ ಹಾಗೂ ಲೇಖನಶಕ್ತಿ.

**ರಿಪುಸ್ಥಾನ:**— ಕುಂಡಲಿಯಲ್ಲಿಯ ಷಷ್ಠಸ್ಥಾನಕ್ಕೆ ರಿಪುಸ್ಥಾನ ಎನ್ನುತ್ತಾರೆ. ಈ ಸ್ಥಾನದಿಂದ ಈ ಸಂಗತಿಗಳನ್ನು ನೋಡಬೇಕು. ಮಾತುಲಪಕ್ಷ. ಅನೇಕ ತರದ ರೋಗ ಶತ್ರುಪೀಡಾ. ಚೋರಭಯ, ಅನೇಕ ತರಹದ ಸಂಕಟ, ಅಪಮಾನಕಾರಕ ಪ್ರಸಂಗ ಸ್ವಜನವಿರೋಧ.

**ಜಾಯಾ ;**— ಕುಂಡಲಿಯಲ್ಲಿಯ ಸಪ್ತಮಸ್ಥಾನಕ್ಕೆ ಜಾಯಾಸ್ಥಾನ ವೆನ್ನುವರು. ಭರ್ತಾ ಹಾಗೂ ಭಾರ್ಯಾವಿಷಯ, ಪ್ರವಾಸ, ಗರ್ಭಾಶಯ, ಅಂಡಾಶಯ, ಧಾತ್ವಾಶಯ, ಮೂತ್ರಾಶಯ, ದಿವಾಣಿ ಖಟ್ಲೆಗಳು, ವ್ಯಾಪಾರ ವಿಷಯ, ತೀರ್ಥಯಾತ್ರಾ ಮೊದಲಾದವುಗಳನ್ನು ಈ ಸ್ಥಾನದಿಂದ ಅರಿತು ಕೊಳ್ಳಬೇಕು.

**ಮೃತ್ಯುಸ್ಥಾನ;**— ಕುಂಡಲಿಯಲ್ಲಿಯ ಅಷ್ಟಮಸ್ಥಾನದಿಂದ ಕೆಳಗಿನ ವಿಷಯಗಳನ್ನು ಈ ಸ್ಥಾನದಲ್ಲಿ ನೋಡಬೇಕು.

ಆಕಸ್ಮಿಕ ದ್ರವ್ಯಲಾಭ, ರೇಸ್, ಜೂಜಂ ಇವುಗಳ ಸಂಗತಿ, ನೌಕರಿ ಯಲ್ಲಿಯ ಲಂಚದ ವಿಷಯ, ನೌಕರ ಚಾಕರರ ಮಾನಸಿಕ ಸ್ಥಿತಿ, ಆಕಸ್ಮಿಕ ವಾದ ಮಾನಸನ್ಮಾನ, ಅಪಮೃತ್ಯು, ಮೃಗಪಕ್ಷಿ, ಪಶು, ಕೀಟಕ, ಮುಂತಾ ದವುಗಳಿಂದ ಭಯ, ರೋಗವಿಷಯ, ಅಪಘಾತ, ಸಂಕಟ ಮುಂತಾದ ವಿಷಯಗಳು.

**ಧರ್ಮಸ್ಥಾನ:**— ಕುಂಡಲಿಯಲ್ಲಿಯ ನವಮಸ್ಥಾನಕ್ಕೆ ಧರ್ಮಸ್ಥಾನ ಎನ್ನುತ್ತಾರೆ. ಪರದೇಶಸಂಚಾರ, ಜಲಪರ್ಯಟನ, ತೀರ್ಥಯಾತ್ರಾ, ಧಾರ್ಮಿಕವಿಧಿ, ಧರ್ಮಶ್ರದ್ಧಾ, ಧರ್ಮಲಂಡಲತನ, ಸಾಧುಸಂತ, ಮಂತ್ರ ಯಂತ್ರ, ಸ್ವಪ್ನಾದಿಕ ವಿಚಾರ, ಮೊಮ್ಮಕ್ಕಳ ಮರಿಮಕ್ಕಳ, ಸುಖ ಇತ್ಯಾದಿ.

**ಕರ್ಮ ;**— ಕುಂಡಲಿಯಲ್ಲಿಯ ೧೦ ನೆಯ ಸ್ಥಾನವು. ಪಿತೃಸುಖ ದ್ರವ್ಯಾರ್ಜನೆಯ ರೀತಿ, ನೌಕರಿ, ಉದ್ಯೋಗ–ಧಂಧೆ, ವ್ಯಾಪಾರ ರಾಜಾನು ಕೂಲತಾ, ಜನಾನುಕೂಲತಾ ಇತ್ಯಾದಿಗಳನ್ನು ಇಲ್ಲಿ ನೋಡಬೇಕು.

**ಲಾಭ ;**—ಕುಂಡಲಿಯಲ್ಲಿಯ ಹನ್ನೊಂದನೆಯ ಸ್ಥಾನಕ್ಕೆ ಲಾಭಸ್ಥಾನ ಎನ್ನುವರು. ಮಿತ್ರಸುಖ, ಅನೇಕ ರೀತಿಯಿಂದ ದ್ರವ್ಯಲಾಭ, ವಸ್ತ್ರಾಲಂಕಾರ ಸುಖ, ವಾಹನಸುಖ, ಸಂತತಿಸುಖ, ಇಚ್ಛಾ ಇತ್ಯಾದಿಗಳನ್ನು ಇಲ್ಲಿ ನೋಡ ಬೇಕು.

**ವ್ಯಯ** :—ಕುಂಡಲಿಯಲ್ಲಿಯ ಹನ್ನೆರಡನೆಯ ಸ್ಥಾನಕ್ಕೆ ವ್ಯಯ ಎನ್ನುತ್ತಾರೆ. ಶತ್ರುಪೀಡಾ ಹಾಗೂ ಭಯ, ಖರ್ಚಿನ ಪ್ರಸಂಗ, ಕಾರಾಗೃಹ ರಾಜದಂಡ, ಮಾನ, ಅಪಮಾನ, ದ್ರವ್ಯನಾಶ, ಕಣ್ಣು ಇತ್ಯಾದಿಗಳು ಈ ಸ್ಥಾನದಿಂದ ತಿಳಿದುಕೊಳ್ಳಬೇಕು.

## ವಿವಾಹ ನಿಯಮ

(೧) ವಧು (ಕನ್ಯಾ) ಇವಳ ವರ್ಣ ವರನ ವರ್ಣಕ್ಕಿಂತ ಶ್ರೇಷ್ಠವಿದ್ದರೆ, ಪತಿಗೆ ಅಥವಾ ಜೇಷ್ಠ ಪುತ್ರನಿಗೆ ಅನಿಷ್ಟ ಆಗುತ್ತದೆ.

(೨) ಪರಸ್ಪರರದು ವೈರಯೋನಿ ಇದ್ದರೆ ಇದು ಅಶುಭದಾಯಕವು.

(೩) ವಧೂವರರದು ಒಂದೇ ಗುಣ ಇದ್ದರೆ ಪ್ರೀತಿದಾಯಕವೂ ಅತ್ಯುತ್ತಮವೂ ಆಗುತ್ತದೆ.

(೪) ಮನುಷ್ಯ ಗಣ ಹಾಗೂ ದೇವಗಣ ಇದು ಮಧ್ಯಮವು; ದೇವ, ಹಾಗೂ ರಾಕ್ಷಸಗಣ ಕಲಹಕಾರಕ, ರಾಕ್ಷಸ ಹಾಗೂ ಮನುಷ್ಯಗಣ ಮೃತ್ಯುದಾಯಕವು.

(೫) ಉಭಯತರರದೂ ಮೃತ್ಯುಷಡಾಷ್ಟಕವಿದ್ದರೆ ತ್ಯಾಜ್ಯವೇದು ತಿಳಿಯಬೇಕು. ನವಪಂಚಕವು ಸಂತತಿಗೆ ತ್ರಾಸದಾಯಕವು. ದ್ವಿರ್ದ್ವಾದಶಕವು ನಿರ್ಧನತೆಯನ್ನು ಸೂಚಿಸುತ್ತದೆ.

ಮೇಲೆ ಹೇಳಿದ ದೋಷಗಳಿಗೆ ಕೆಲವೊಂದು ಅಪವಾದಗಳನ್ನು ಶಾಸ್ತ್ರೋಕ್ತವಾಗಿ ಕೊಟ್ಟಿದೆ.

(೧) ಅತಿ ಅವಶ್ಯಕ ವಿವಾಹ ಸಂದರ್ಭವಿದ್ದು ವಧೂ-ವರರ ದುಷ್ಟ ಕೂಟ ಮೊದಲಾದ ದೋಷ ನಿವಾರಣೆಗಾಗಿ; ಷಡಾಷ್ಟಕವಿದ್ದರೆ ಎರಡು ಆಕಳಗಳನ್ನೂ, ನವಪಂಚಕ ಇದ್ದರೆ ಬೆಳ್ಳಿ ತುಂಬಿದ ಕುಂಭವನ್ನೂ ದಾನ ಮಾಡಬೇಕು. ದ್ವಿರ್ದ್ವಾದಶಕವಿದ್ದರೆ ಬ್ರಾಹ್ಮಣರಿಗೆ ಅನ್ನ ಸಂತರ್ಪಣೆ ಮಾಡಬೇಕು.

(೨) ವಧೂವರರಿಗೆ ಮಂಗಳ, ಶನಿ, ರಾಹು, ರವಿ ಇವು ಜನ್ಮ ಕುಂಡಲಿಯಲ್ಲಿ ಅಶುಭ ಹಾಗೂ ಅನಿಷ್ಟದಾಯಕವಾಗಿದ್ದರೆ, ಶಾಸ್ತ್ರೋಕ್ತವಾಗಿ ಶಾಂತಿ: ಅನುಷ್ಠಾನ-ಜಪಾದಿಗಳನ್ನು ವಿವಾಹ ಪೂರ್ವದಲ್ಲಿ ಮಾಡಿಸಬೇಕು.

ಉಪನಯನ ಸಂಸ್ಕಾರವು ಬ್ರಹ್ಮಚಾರಿಗಳಿಗೆ ಹೇಗೆ ಹೊಸ ಜನ್ಮವಿದ್ದಂತೆ ಇರುವುದೋ ಹಾಗೆ, ಕನ್ಯೆಯರಿಗೆ ವಿವಾಹ ಸಂಸ್ಕಾರವು ಕೂಡಾ ಶಾಸ್ತ್ರೋಕ್ತವಾಗಿ ನವೀನ ಜನ್ಮವಿದ್ದಂತೆ; ಆದ್ದರಿಂದ ಧಾರ್ಮಿಕ ಕ್ರಿಯೆಗಳನ್ನು ದೋಷ ಪರಿಹಾರಕ್ಕಾಗಿ ವಿವಾಹ ಪೂರ್ವದಲ್ಲಿ ಮಾಡಲೇಬೇಕು.

(೩) ರಾಶಿಯ ಸ್ವಾಮಿ ಒಬ್ಬನೇ ಅಥವಾ ಮಿತ್ರರಾಗಿದ್ದರೆ ದೋಷವು ಕಡಿಮೆ ಆಗುವದು.

(೪) ವಧೂವರರ ರಾಶಿಯು ಒಂದೇ ಇದ್ದು ನಕ್ಷತ್ರಗಳು ಭಿನ್ನ ಭಿನ್ನವಾಗಿದ್ದರೆ, ನಕ್ಷತ್ರ ಒಂದೇ ಇದ್ದು ರಾಶಿ ಭಿನ್ನ ಭಿನ್ನವಾಗಿದ್ದರೆ, ಅಥವಾ ರಾಶಿ ಹಾಗೂ ನಕ್ಷತ್ರ ಒಂದೇ ಇದ್ದು ಚರಣ ಭಿನ್ನವಾಗಿದ್ದರೆ, ಗ್ರಹವೈರ, ಏಕನಾಡಿ, ಗಣ ಮುಂತಾದವುಗಳ ದೋಷವಿಲ್ಲ. ಈ ಯೋಗವು ವಿವಾಹಕ್ಕೆ ಅತ್ಯುತ್ತಮ.

(೫) ಜನ್ಮಲಗ್ನವು ಇದು ಮನುಷ್ಯನ ಶರೀರವು. ಜನ್ಮರಾಶಿ ಇದು ಮನುಷ್ಯನ ಮನಸ್ಸು.

ಜನ್ಮ ಟಿಪ್ಪಣಿಯನ್ನು ನೋಡುವದು ವಧೂವರರಲ್ಲಿಯ ಪರಸ್ಪರ ಪ್ರೇಮಕ್ಕಾಗಿ.

ಪ್ರೇಮ — ಇದು ಮನಸ್ಸಿನಿಂದ ತಿಳಿಯುವುದು; ಶರೀರದಿಂದ ತಿಳಿಯುವದಿಲ್ಲ. ಆದ್ದರಿಂದ ಟಿಪ್ಪಣಿ ನೋಡುವಾಗ ಲಗ್ನದಿಂದ ಅಲ್ಲ. ಜನ್ಮ ನಕ್ಷತ್ರ ರಾಶಿಗಳಿಂದ ನೋಡುವುದೇ ಲಾಭದಾಯಕವು ಹಾಗು ಅತ್ಯುತ್ತಮವು.

(೬) ಗ್ರಹಮೈತ್ರಿ, ತಾರಾಕೂಟಶುದ್ಧಿ ಹಾಗೂ ವಶ್ಯಕೂಟ ಶುದ್ಧಿ ಈ ಮೂರು ಶುಭವಿದ್ದರೆ ನವಪಂಚಕ ದ್ವಿರ್ದ್ವಾದಶಕ ದೋಷವು ಕೂಡ ಹತ್ತುವುದಿಲ್ಲ.

(೭) ಉತ್ತಮ ಪತ್ರಿಕಾ ಕೂಡಿ ಬಂದರೆ ವಿವಾಹ ಮಾಡುವುದು ಶ್ರೇಯಸ್ಕರವು.

ಅಪವಾದದಿಂದ ಅಥವಾ ಶಾಂತಿ, ಜಪಾದಿಗಳನ್ನು ಮಾಡಿಸಿ ವಿವಾಹ ಮಾಡುವುದು ಮಧ್ಯಮವು. ಪತ್ರಿಕೆಯು ಕನಿಷ್ಠವಿದ್ದು, ಶಾಸ್ತ್ರೋಕ್ತವಾಗಿ ಶಾಂತಿ ಮೊದಲಾದುವುಗಳನ್ನು ಮಾಡದೇ ಹಾಗೆಯೇ ವಿವಾಹ ಸಾಂಗಗೊಳಿಸುವುದು ಕನಿಷ್ಠಮಾರ್ಗವು.

(೮) ಅಶ್ವಿನೀ, ಮಘಾ, ಮೂಲಾ ಈ ನಕ್ಷತ್ರದ ಪೂರ್ವಾರ್ಧದಲ್ಲಿ ಪುತ್ರನ ಕನ್ಯೆಯ ಜನ್ಮವಾದರೆ ತಂದೆಗೆ ಕೆಡಕು; ರೇವತೀ ಹಾಗೂ ಜ್ಯೇಷ್ಠಾ ಈ ನಕ್ಷತ್ರದ ಉತ್ತರಾರ್ಧದಲ್ಲಿ ಜನ್ಮಿಸಿದರೆ ತಾಯಿಗೆ ಕೆಡಕು. ಮೂಲಾದ ಮೊದಲನೆಯ ಎರಡನೆಯ ಚರಣದಲ್ಲಿ ಜನ್ಮವಾದರೆ ತಂದೆ ತಾಯಿ ಇಬ್ಬರಿಗೂ ಕೆಡಕು.

(೯) ಕರ್ಕ-ಸಿಂಹಲಗ್ನದ ಸಂಧಿ ಇದ್ದರೆ, ಪ್ರತಿಯೊಂದರ ಅರ್ಧ ಘಳಿಗೆ ವೃಶ್ಚಿಕ-ಧನು, ಮೀನ-ಮೇಷ ಈ ಲಗ್ನದ ಸಂಧಿ ಇದ್ದರೆ ೧॥ ಘಳಿಗೆ ಇಂತಹ ಸಮಯದಲ್ಲಿ ಜನ್ಮಿಸಿದರೆ, ಲಗ್ನ ಗಂಡಾಂತರವೆನಿಸುತ್ತದೆ.

(೧೦) ಹುಣ್ಣಿಮೆಯ ಕೊನೆಯ ಒಂದು ಘಳಿಗೆ ಅಥವಾ ಪ್ರತಿಪದೆಯ ಮೊದಲನೆಯ ಘಳಿಗೆ, ಪಂಚಮಿಯ ಕೊನೆಯ ಒಂದು ಘಳಿಗೆ, ದಶಮಿಯ ಕೊನೆಯ ಒಂದು ಘಳಿಗೆ, ಏಕಾದಶಿಯ ಮೊದಲಿನ ಒಂದು ಹೀಗೆ ಸಂಧಿಗ್ಧ ಸಮಯ ಇದ್ದರೆ, ಆಗ ಜನ್ಮಿಸಿದರೆ ತಿಥಿಗಂಡಾಂತರ ಎನ್ನುತ್ತಾರೆ.

(೧೧) ರೇವತಿಯ ಕೊನೆಯ, ಅಶ್ವಿನಿಯ ಮೊದಲನೆಯ ಆದರಂತೆ ಆಶ್ಲೇಷಾ, ಮಘಾ, ಜ್ಯೇಷ್ಠಾ, ಮೂಲಾ ಇವುಗಳ ಸಂಧಿಸಮಯಕ್ಕೆ ನಕ್ಷತ್ರ ಗಂಡಾಂತರವೆನ್ನುವರು.

ಹೀಗೆ ಲಗ್ನ ಗಂಡಾಂತರ, ತಿಥಿಗಂಡಾಂತರ, ನಕ್ಷತ್ರ ಗಂಡಾಂತರ ಮುಂತಾದ ದೋಷಪರಿಹಾರಕ್ಕಾಗಿ ಶಾಂತಿ ಮಾಡಬೇಕು. ಈ ಮೂರು ಗಂಡಾಂತರ ಸಮಯಗಳು ತೀರ್ಥಯಾತ್ರಾ, ವಿವಾಹ ಇವು ತ್ಯಾಜ್ಯ ಇರುತ್ತದೆ.

(೧೨) ಚತುರ್ದಶಿಯುಕ್ತ ಅಮಾವಾಸ್ಯೆಯಲ್ಲಿ ಅಥವಾ ಅಮಾವ್ಯಾಸ್ಯಾ ಪೂರ್ವದಲ್ಲಿ ಜನ್ಮಿಸಿದಾಗ ಅತ್ಯಂತ ದೋಷವಿದೆ. ಅದ್ದರಿಂದ ಶಾಂತಿ ಮಾಡಿಸಲೆ ಬೇಕು.

(೧೩) ವ್ಯತಿಪಾತ, ವ್ಯಾಘಾತ, ವೈಧೃತಿ, ಶೂಲ, ಅತಿಗಂಡ, ಗಂಡ ಪರಿಘತ ಪೂರ್ವಾರ್ಧ, ಇವೆಲ್ಲ ದೋಷದಾಯಕ ಯೋಗಗಳು. ಇವುಗಳಿಗೆ ಶಾಂತಿಯಿದೆ.

ವಧೂವರರ ಟಿಪ್ಪಣಿ ನೋಡುವಾಗ, ರಾಶಿಗಿಂತ ನಕ್ಷತ್ರಕ್ಕೆ ಹೆಚ್ಚು ಮಹತ್ವವಿದೆ. ಏಕೆಂದರೆ ಗಣ, ನಾಡಿ, ಯೋನಿ ಮುಂತಾದುವು ರಾಶಿ

ಯಿಂದ ಹೇಳಲ್ಪಡುವದಿಲ್ಲ, ನಕ್ಷತ್ರದಿಂದ ಹೇಳಲ್ಪಡುತ್ತವೆ. ಆದ್ದರಿಂದ ವಿವಾಹ ಸಮಯದಲ್ಲಿ ರಾಶಿಗಿಂತ ನಕ್ಷತ್ರದ ಮಹತ್ವ ಹಾಗೂ ಬಲಾಬಲಕ್ಕೆ ಹೆಚ್ಚು ಪ್ರಾಧಾನ್ಯತೆ ಇದೆ. ಉದಾ :– ಪುಷ್ಯಾ ಹಾಗೂ ಆಶ್ಲೇಷಾ ಈ ಎರಡು ನಕ್ಷತ್ರಗಳಲ್ಲಿ ಅಸಮಾನ ಅಂತರವಿದೆ. ಎರಡೂ ನಕ್ಷತ್ರಗಳ ರಾಶಿ ಒಂದೇ; ರಾಶ್ಯಾಧಿಪ ಒಂದೇ ಆದರೂ ಅವುಗಳ ಗುಣದಲ್ಲಿ ಸಾಮ್ಯ ಇಲ್ಲ.

ಕುಂಡಲಿಯಲ್ಲಿ ಮಂಗಳನ ವಿಚಾರ ಮಾಡುವಾಗಲೂ ನಕ್ಷತ್ರಕ್ಕೆ ಹೆಚ್ಚು ಪ್ರಾಧಾನ್ಯತೆ ಇದೆ. ಉದಾ;—ಮಕರೇ ಮಂಗಳ, ಮೇಷೇ ಮಂಗಳ ವೃಶ್ಚಿಕೇ ಮಂಗಳ ಬಹಳ ಉಗ್ರನಾಗಿರುವನು. ಆದುದರಿಂದ ಈ ಸ್ಥಾನದ ಮಂಗಳನಿಗೆ ಬಹಳ ಮಹತ್ವವಿದೆ. ಅದರಲ್ಲಿಯೂ ಭರಣಿ, ಮಘಾ, ಜ್ಯೇಷ್ಠಾ ಧನಿಷ್ಠಾ ಈ ನಕ್ಷತ್ರದ ಮಂಗಳನು ಎಷ್ಟು ಉಗ್ರನೋ ಅಥವಾ ಎಷ್ಟು ದೋಷಿಯೋ ಅಷ್ಟು ದೋಷ ಅನುರಾಧಾ. ಶ್ರವಣಾ, ಅಶ್ವಿನೀ, ಉತ್ತರಾಷಾಢಾ ಈ ನಕ್ಷತ್ರಗಳಲ್ಲಿ ಆಗುವದಿಲ್ಲ. ಆದ್ದರಿಂದ ರಾಶಿಗಿಂತ ನಕ್ಷತ್ರ ಚರಣ ಇವುಗಳಿಗಾಗಿ ತುಂಬ ಹೆಚ್ಚು ವಿಚಾರ ಮಾಡಬೇಕು. ಇದರ ಕಾರಣ ವೇನೆಂದರೆ– ಆಕಾಶದಲ್ಲಿರುವ ನಕ್ಷತ್ರದ ಸ್ಥಾನಗಳು ಸ್ಥಿರವಿದ್ದು ಕ್ಷೀಣತೆ ಇರುವುದಿಲ್ಲ. ಆದ್ದರಿಂದ ಆ ನಕ್ಷತ್ರದಲ್ಲಿ ಜನ್ಮಿಸಿದ ವ್ಯಕ್ತಿಯ ಪರಿಣಾಮವು ಆ ನಕ್ಷತ್ರದ ಗುಣಧರ್ಮದಂತೆ ಆಗುತ್ತದೆ: ಅಲ್ಲದೆ ನಕ್ಷತ್ರದ ವ್ಯಾಖ್ಯೆ ಹೀಗೆ ಇದೆ—ನ ಕ್ಷರತಿ ತತ್ ನಕ್ಷತ್ರಂ ! ಯಾವುದಕ್ಕೆ ಕ್ಷೀಣತ್ವ ಇರುವುದಿಲ್ಲವೋ ಅದಕ್ಕೆ ನಕ್ಷತ್ರವೆನ್ನುತ್ತಾರೆ.

ಉಗ್ರನಕ್ಷತ್ರಗಳೂ ಶಾಂತಿಕಾರಕ ನಕ್ಷತ್ರಗಳೂ ಆದ ಈ ನಕ್ಷತ್ರಗಳ ಗುಣಧರ್ಮಗಳಿಗೆ ಅನುಗುಣವಾಗಿ ವಧೂವರರನ್ನು ಹೊಂದಿಸಿದರೆ, ಅವರ ಜೀವನ ಸುಲಲಿತವಾಗಿ ಸಾಗುವುದು. ಉದಾ:-ಆಶ್ಲೇಷಾ ನಕ್ಷತ್ರದಲ್ಲಿ ಜನ್ಮಿಸಿದ ವಧುವಿಗೆ ಅತ್ತೆಯ ಸೌಖ್ಯ ಇಲ್ಲ; ಅದ್ದರಿಂದ ಅತ್ತೆ ಇಲ್ಲದ ಮನೆ ನೋಡಿ ಕೊಟ್ಟರೆ ವಿಹಿತವು. ಇದರಂತೆ ವಿಶಾಖಾ ನಕ್ಷತ್ರದಲ್ಲಿ ಜನ್ಮಿಸಿದ ವಧುವಿಗೆ ಮೈದುನ ಇಲ್ಲದ ಮನೆ, ಜ್ಯೇಷ್ಠಾ ನಕ್ಷತ್ರದ ವಧುವಿಗೆ ಭಾವ ಇಲ್ಲದ ಮನೆ: ಮೂಲಾ ನಕ್ಷತ್ರದ ವಧುವಿಗೆ ಮಾವ ಇಲ್ಲದ ಮನೆ-ಹೀಗೆ ನೋಡಿ ಲಗ್ನಮಾಡಿದರೆ. ಅವರ ದಾಂಪತ್ಯ ಜೀವನ ಸುಲಲಿತ ಸಾಗುವುದು.

## ವಿವಾಹದ ಸಲುವಾಗಿ ಶುಭ ಮಾಸಗಳು

(೧) ಮಾಘ, (೨) ಫಾಲ್ಗುಣ, (೩) ವೈಶಾಖ, (೪) ಜ್ಯೇಷ್ಠ ಇವು ವಿವಾಹಕ್ಕಾಗಿ ಉತ್ತಮವು. ತದನಂತರ ಮಾರ್ಗಶೀರ್ಷ ವಿಂಧ್ಯಾಸಾಷಾಢ ವೃಶ್ಚಿಕದಲ್ಲಿ ಸೂರ್ಯನಿದ್ದಾಗ ಕಾರ್ತಿಕಮಾಸವೂ. ಮೇಷದಲ್ಲಿ ರವಿ ಇದ್ದಾಗ ಚೈತ್ರಮಾಸವೂ. ಶುಭದಾಯಕವು. ಜ್ಯೇಷ್ಠವರ, ಜ್ಯೇಷ್ಠವಧು ಇವರ ವಿವಾಹವನ್ನು ಜ್ಯೇಷ್ಠಮಾಸದಲ್ಲಿ ಮಾಡಬಾರದು; ಏಕೆಂದರೆ ಮೂರು ಜ್ಯೇಷ್ಠಗಳು ಕೂಡುವವು. ಇತರ ಮಾಸಗಳಲ್ಲಿ ಮಾಡಬಹುದು. ಇದಲ್ಲದೆ ವಧೂವರರಲ್ಲಿ ಒಬ್ಬರು ಜ್ಯೇಷ್ಠರಿದ್ದರೆ ಆ ವಿವಾಹವು ಜ್ಯೇಷ್ಠಮಾಸದಲ್ಲಿ ಮಧ್ಯಮವಾಗುತ್ತದೆ. ಜನ್ಮಮಾಸ ಹಾಗೂ ಜನ್ಮನಕ್ಷತ್ರ, ಜ್ಯೇಷ್ಠಾ-ಜ್ಯೇಷ್ಠವಿದ್ದರೂ ಜ್ಯೇಷ್ಠಮಾಸದಲ್ಲಿ ವಿವಾಹ ಮಾಡಬಾರದು ಎಂದು ಧರ್ಮಸಿಂಧು ಹೇಳಿರುತ್ತದೆ.

ಶುಕ್ಲಪಕ್ಷವು ವಿವಾಹಕ್ಕೆ ಅತ್ಯುತ್ತಮವು. ವಿವಾಹಕ್ಕೆ ಉಪಯುಕ್ತವಾದ ತಿಥಿ, ನಕ್ಷತ್ರ, ವಾರಗಳು ಆರಿದ್ರಾ ನಕ್ಷತ್ರದಿಂದ ಮುಂದಿನ ನಕ್ಷತ್ರಗಳಲ್ಲಿ ಸೂರ್ಯನಿದ್ದರೆ ವಿವಾಹ ಕಾಲವು ಒಳ್ಳೆಯದಲ್ಲವೆಂದು; ವಸಿಷ್ಠಋಷಿಗಳು ಹೇಳಿದ್ದಾರೆ. ಆದರೆ ಕೌಸ್ತುಭ, ನಿರ್ಣಯಸಿಂಧು ಗ್ರಂಥಗಳಲ್ಲಿ ಆರಿದ್ರಾ ಮೊದಲಾದ ನಕ್ಷತ್ರಗಳ ದೋಷವಿಲ್ಲವೆಂದು ಹೇಳಿದೆ. ಅಮಾವಾಸ್ಯೆಯು ವಿವಾಹಕ್ಕೆ ನಿಷೇಧವಿದೆ. ಸೋಮವಾರ, ಬುಧವಾರ, ಗುರುವಾರ, ಶುಕ್ರವಾರ ಇವು ಉತ್ತಮ ವಾರಗಳು. ಅದರಂತೆ ರೋಹಿಣಿ, ಮೃಗಶಿರಾ, ಮಘಾ, ಉತ್ತರಾ, ಉತ್ತರಾಷಾಢಾ, ಉತ್ತರಾಭಾದ್ರಪದಾ, ಹಸ್ತಾ, ಸ್ವಾತಿ ಮೂಲಾ, ಅನುರಾಧಾ, ರೇವತಿ ಇವು ವಿವಾಹಕ್ಕೆ ಶುಭ ನಕ್ಷತ್ರಗಳು ಇರುತ್ತವೆ. ಹರಿದತ್ತನ ವಿಚಾರದ ಪ್ರಕಾರ ಚಿತ್ರಾ, ಶ್ರವಣಾ, ಧನಿಷ್ಠಾ, ಅಶ್ವಿನೀ ಈ ನಾಲ್ಕು ನಕ್ಷತ್ರಗಳು ಅತ್ಯುತ್ತಮವೆಂದು ಹೇಳಿದ್ದಾರೆ. ಆದರೆ ಈ ನಕ್ಷತ್ರಗಳು ವಿವಾಹ ಸಮಯದಲ್ಲಿ ಪಾಪಗ್ರಹಗಳಿಂದ ಕೂಡಿರಬಾರದು.

ವಿವಾಹವೇ ಮೊದಲಾದ ಮಂಗಳ ಕಾರ್ಯಗಳಿಗೆ ಘಾತಮಾಸಾದಿಗಳನ್ನು ನೋಡಬಾರದು-ಎಂದು ಧರ್ಮಸಿಂಧುವು ಹೇಳಿದೆ.

ವಿವಾಹ ಯಾವ ಲಗ್ನದ ಮೇಲೆ ಜರುಗುವುದೋ ಆ ಕಾಲಕ್ಕೆ ಈ ಸ್ಥಾನಗಳ ಇಲ್ಲವೇ ಸಪ್ತಮದಲ್ಲಿ ಗುರು–ಶುಕ್ರರು ಇದ್ದರೆ ಒಳ್ಳೆಯದು ಲಗ್ನ ದ್ವಿತೀಯ, ಚತುರ್ಥ, ಪಂಚಮ, ಸಪ್ತಮ, ನವಮ, ದಶಮ, ಏಕಾದಶ ಈ ಸ್ಥಾನದಲ್ಲಿ ಚಂದ್ರ, ಗುರು, ಶುಕ್ರರಿದ್ದರೆ ಉತ್ತಮ. ಗುರುವಿನ ದೃಷ್ಟಿ ಸಪ್ತಮದಲ್ಲಿರಬೇಕು.

ಯಾವ ಲಗ್ನದಲ್ಲಿ ವಿವಾಹ ಜರುಗುವದೋ, ಆ ಲಗ್ನದಲ್ಲಿ ಹಾಗೂ ಸಪ್ತಮ ಸ್ಥಾನದಲ್ಲಿ ರವಿ, ಕುಜ, ಶನಿ, ರಾಹು ಈ ಯಾವುದೇ ಗ್ರಹಗಳು ಈ ಸ್ಥಾನದಲ್ಲಿರಬಾರದು. ಲಗ್ನದಿಂದ ೬ನೆಯ, ೮ನೆಯ, ೧೨ನೆಯ ಸ್ಥಾನದಲ್ಲಿ ಚಂದ್ರನಿರಬಾರದು. ಬುಧ–ಗುರುಗಳು ೮ನೆಯ, ೧೨ನೆಯ ಸ್ಥಾನದಲ್ಲಿರಬಾರದು. ಲಗ್ನಾಧಿಪನು ಷಷ್ಠ, ಅಷ್ಟಮಸ್ಥಾನದಲ್ಲಿರಬಾರದು. ಶನಿ–ಮಂಗಳರ ದೃಷ್ಟಿಯು ಸಪ್ತಮಸ್ಥಾನದಲ್ಲಿರಬಾರದು. ಗೋಧೂಲಿ(ಗೋರಜ) ಸೂರ್ಯ ಅಸ್ತನಾಗುವ ಪೂರ್ವದಲ್ಲಿ ೧೫ ಪಳ ಹಾಗೂ ಅಸ್ತನಾದ ಮೇಲೆ ೧೫ ಪಳ ಇದಕ್ಕೆ ಗೋಧೂಲೀ ಮುಹೂರ್ತ ಎನ್ನುತ್ತಾರೆ. ವಿವಾಹಕ್ಕೆ ಯೋಗ್ಯವಾದ ಹಾಗೂ ಪಂಚಾಂಗ ಶುದ್ಧವಾದ ಮುಹೂರ್ತವೆಂದರೆ ಗೋಧೂಲಿಯು. ಲಗ್ನದಿಂದ ೬ನೆಯ, ೮ನೆಯ ಸ್ಥಾನದಲ್ಲಿ ಚಂದ್ರನೂ, ಪಾಪಗ್ರಹ ಯುಕ್ತವಾದ ಲಗ್ನವೂ. ೮ನೆಯ ಸ್ಥಾನದಲ್ಲಿ ಕುಜನು, ೮–೧೨ರಲ್ಲಿ ಗುರು ಶನಿಗಳಿದ್ದರೆ. ಸೂರ್ಯ ಸಂಕ್ರಾಂತಿಯು ಇದ್ದರೆ ಗೋರಜ ಮುಹೂರ್ತವು ತ್ಯಾಜ್ಯವು.

**ಇಪ್ಪತ್ತೊಂದು ಮಹಾದೋಷಗಳು :**—(೧) ದುಷ್ಟ ಪಂಚಾಂಗ–ಎಂದರೆ ಯಾವ ಕಾರ್ಯಕ್ಕೆ ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳು ಒಳ್ಳೆಯವು ಇರುವದಿಲ್ಲವೋ ಆ ತರಹ ದಿವಸ (ಪಂಚಾಂಗ ಅಶುದ್ಧಿ), (೨) ಲಗ್ನದಿಂದ ಅಷ್ಟಮದಲ್ಲಿ ಮಂಗಳನಿದ್ದರೆ. (೩) ಲಗ್ನವು ಚಂದ್ರ ಹಾಗೂ ಪಾಪ ಗ್ರಹಗಳಿಂದ ಕೂಡಿದ್ದರೆ. (೪) ಲಗ್ನದಿಂದ ಷಷ್ಠ ಹಾಗೂ ಅಷ್ಟಮದಲ್ಲಿ ಚಂದ್ರ, (೫) ಲಗ್ನದಿಂದ ಷಷ್ಠದಲ್ಲಿ ಶುಕ್ರ, (೬) ಸಂಕ್ರಾಂತಿ ದಿವಸ, (೭) ಗಂಡದೋಷ, ಲಗ್ನಗಂಡಾಂತರ, ತಿಥಿಗಂಡಾಂತರ, ನಕ್ಷತ್ರ ಗಂಡಾಂತರ, (೮) ಪಾಪಗ್ರಹಯುಕ್ತ ನಕ್ಷತ್ರ, (೯) ಅರ್ಧಯಾಮಾದಿಕ ದೋಷ, (೧೦) ವೈಧೃತಿ, ವ್ಯತಿಪಾತ ಸಂಜ್ಞೆಯ ಚಂದ್ರ–ಸೂರ್ಯರ ಕ್ರಾಂತಿಯು

ಸಾಮ್ಯತೆ, (೧೧) ರಂಧ್ರಲಗ್ನ (ಜನ್ಮರಾಶಿಯಿಂದ ಅಷ್ಟಮ ಲಗ್ನ), (೧೨) ಕುವರ್ಗ ಎಂದರೆ ಷಡ್ವರ್ಗದಲ್ಲಿ ಪಾಪಗ್ರಹದ ವರ್ಗವು ಅಧಿಕವಿದ್ದರೆ, (೧೩) ಲಗ್ನದಿಂದ ಸಪ್ತಮದಲ್ಲಿ ಪಾಪಗ್ರಹ, (೧೪) ಕರ್ತರಿ ದೋಷ ಎಂದರೆ ಚಂದ್ರನಿಂದ ಅಥವಾ ಲಗ್ನದಿಂದ ೨-೧೨ ಈ ಸ್ಥಾನಗಳಲ್ಲಿ ಪಾಪಗ್ರಹಗಳಿರುವುದು, (೧೫) ಕ್ರೂರವೇಧ, (೧೬) ಏಕಾರ್ಗಲಾಂಘ್ರಿ, (೧೭) ಗ್ರಹಣ ಎಂದರೆ ಯಾವ ನಕ್ಷತ್ರದಲ್ಲಿ ಗ್ರಹಣವಾಗುತ್ತಿದೆಯೋ ಆ ನಕ್ಷತ್ರ, (೧೮ ಕುಲವ ಎಂದರೆ ಅನುಕ್ತ ನವಾಂಶ, (೧೯) ದುರ್ಮುಹೂರ್ತ, ಎಂದರೆ ಶುಕ್ರವಾರ ೯ ನೆಯ ಮುಹೂರ್ತ ಹಾಗೂ ಮಂಗಳವಾರ ರಾತ್ರಿ ೭ ನೆಯ ಮುಹೂರ್ತ, (೨೦) ಉತ್ಪಾತ ನಕ್ಷತ್ರ ಎಂದರೆ ಯಾವ ನಕ್ಷತ್ರದ ಮೇಲೆ ಭೂಕಂಪವಾಗುತ್ತದೆಯೋ ಆ ನಕ್ಷತ್ರವು.

ಮೇಲೆ ವಿವರಿಸಿದ ಈ ಮಹಾದೋಷಗಳ ಮೇಲೆ ವಿವಾಹ ಕಾರ್ಯವನ್ನು ಸ್ಥಗಿತಗೊಳಿಸಬೇಕು.



# ೬. ವಿವಾಹ ವಿಷಯಕವಾದ ಮಹತ್ತ್ವದ ಸಂಗತಿ

ವಧೂ-ವರರ ವಿವಾಹವಾಗುವ ಕಾಲ ಯಾವುದು ? ಅವರ ಕೌಟುಂಬಿಕ, ಸಾಂಪತ್ತ್ರಿಕ ಸ್ಥಿತಿಗತಿಗಳೇನು ? ಪರಸ್ಪರರಲ್ಲಿ ಪ್ರೀತಿಯಿರುವುದೋ-ಇಲ್ಲವೊ ? ಅವರ ರೂಪಗುಣಾದಿಗಳು ಎಂತಿರುವವು ? ಈ ಎಲ್ಲ ವಿಷಯುಗಳನ್ನು ಈ ಪ್ರಕರಣದಲ್ಲಿ ವಿವರಿಸಲಾಗಿದೆ. ವರನ ಕುಂಡಲಿಯಲ್ಲಿ ಇದ್ದ ಯೋಗಕಾರಕ ಗ್ರಹಗಳಿಂದ ವಧುವಿನ ಸ್ಥಿತಿಗತಿಗಳನ್ನು, ವಧುವಿನ ಕುಂಡಲಿಯಲ್ಲಿದ್ದ ಯೋಗಕಾರಕ ಗ್ರಹಗಳಿಂದ ವರನ ಸ್ಥಿತಿಗತಿಗಳನ್ನು ಹೇಳಲು ಬರುತ್ತದೆ. ವಧೂವರರ ಶಾರೀರಿಕ ಸ್ಥಿತಿ ಅಲ್ಲದೆ ನೌಕರ ಚಾಕರರ ವಿಷಯವೆಲ್ಲವನ್ನು ಇಲ್ಲಿ ವಿವರಿಸಿದೆ.

ವಿವಾಹದ ಕಾಲನಿರ್ಣಯ ಬಹಳ ಮಹತ್ತ್ವದ್ದು. ಆದರಲ್ಲಿಯೂ ಪುರುಷನ ವಿವಾಹ ಕಾಲಕ್ಕಿಂತ ಹೆಣ್ಣು ಮಕ್ಕಳ ವಿವಾಹ ಕಾಲವು ಅತ್ಯಂತ ಮಹತ್ವದ್ದು. ಇಂತಹ ವರ್ಷವೇ, ಇಂತಹ ತಿಥಿಗೇ ಇಂತಹ ನಕ್ಷತ್ರದ ಮೇಲೆಯೇ ವಿವಾಹವಾಗುವುದೆಂದು ಯಾರು ಹೇಳಬಲ್ಲರು ? ವಿವಾಹವೆಂದರೆ ಒಂದು ಭಾಗ್ಯಕಾಲವು. ಈ ಭಾಗ್ಯಕಾಲ ಯಾವ ಯಾವ ವರ್ಷ ಬರುತ್ತದೆ ಯೆಂಬುದನ್ನು ಹೇಳಬಹುದು. ವಿವಾಹ ಕಾಲದ ನಿರ್ಣಯದ ಬಗ್ಗೆ ಅನೇಕ ರೀತಿಗಳಿವೆ.

ವಿವಾಹದ ಪ್ರಶ್ನೆಯನ್ನು ವಿಚಾರಿಸುವಾಗ ಮುಖ್ಯವಾಗಿ ಒಂದು ಸಂಗತಿಯನ್ನು ಲಕ್ಷ್ಯದಲ್ಲಿಡಬೇಕು ! ನಾವು ವಿಚಾರಿಸುವ ವ್ಯಕ್ತಿ ಯಾವ ಸಮಾಜದವನು ? ಅವನ ಸಮಾಜದ ರೀತಿ-ರಿವಾಜು ಏನು ? ಅವನ ವಿಧಿಗಳಾವವು ? ಎಂಬುದನ್ನು ವಿಚಾರಿಸಬೇಕು. ಯಾಕೆಂದರೆ ವಿವಾಹದ ಬಗ್ಗೆ ಬೇರೆ ಬೇರೆ ಧರ್ಮಗಳಲ್ಲಿ ಬೇರೆ ಬೇರೆ ವಿಧಿಗಳಿವೆ. ಸಿಂಧಿ, ಪಾರ್ಸಿ ಸಮಾಜದಲ್ಲಿ ಸ್ತ್ರೀಯರ ಲಗ್ನ ಬಹುತರವಾಗಿ ೨೫ ವರುಷಗಳ ನಂತರವಾಗುತ್ತದೆ. ೩೫-೪೦ ವರುಷದ ಕುಮಾರಿಯರನ್ನೂ ನಾವು ಆ ಸಮಾಜದಲ್ಲಿ ಕಾಣಬಹುದಾಗಿದೆ ಯೂರೋಪಿಯನರಲ್ಲಿ ಯಾವುದೇ ವಿಧಿ-ನಿಷೇಧವಿದ್ದಂತಿಲ್ಲ. ೪೦

ವರುಷದ ವರನಿಗೆ ೫೦ ವರುಷದ ವಧು ಇರುತ್ತಾಳೆ. ಆದರೆ ಮುಸಲ್ಮಾನ ರಲ್ಲಿ ವಿವಾಹವು ಚಿಕ್ಕ ವಯಸ್ಸಿನಲ್ಲಿಯೇ ಜರುಗುತ್ತದೆ. ಇದರಂತೆ ಗುಜ ರಾತಿ, ಮಾರವಾಡಿ ಜನರಲ್ಲಿ ಕೂಡ ವಿವಾಹವು ಚಿಕ್ಕ ವಯಸ್ಸಿನಲ್ಲಿಯೇ ನಡೆಯುತ್ತದೆ; ಜೈನ-ಬೌದ್ಧರಲ್ಲಿ ತಡವಾಗಿ ಆಗುತ್ತದೆ. ಗೌಡ ಸಾರಸ್ವತ ರಲ್ಲಿ ಪುರುಷರ ವಿವಾಹ ತಡವಾಗಿ ಆಗುವದನ್ನು ಕಾಣಬಹುದು. ಈ ರೀತಿ ಮೇಲೆ ವಿವರಿಸಿದ ವಿಷಯಗಳನ್ನು ಲಕ್ಷ್ಯದಲ್ಲಿ ತಂದರೆ ವಧೂ-ವರರ ವಿವಾ ಹದ ಕಾಲವನ್ನು ನಿರ್ಣಯಿಸುವಾಗ ಆವರವರ ಸಮಾಜ, ಧರ್ಮ, ಮತಗಳ ಬಗ್ಗೆ ಕೂಡ ವಿಚಾರಿಸಬೇಕಾಗುವದು.

## ಸ್ವಭಾವ, ಗುಣ, ಪ್ರೇಮ ಹಾಗೂ ಮಿತ್ರತ್ವ

ವಧೂ-ವರರ ಸ್ವಭಾವ, ಗುಣ, ರೂಪ, ಪ್ರೇಮ, ಮಿತ್ರತ್ವ ಇವು ಗಳ ವಿಚಾರ ಮಾಡುವಾಗ, ಸಪ್ತಮಸ್ಥಾನ ಹಾಗೂ ಸಪ್ತಮಾಧಿಪ, ಇವು ಗಳಿಂದ ವಧೂ-ವರರ ಸ್ಥಿತಿಗತಿಗಳನ್ನು ಹೇಳಬಹುದು. ಸಪ್ತಮಸ್ಥಾನದಲ್ಲಿ ಇರುವ ಗ್ರಹಗಳ ಬಲಾಬಲ; ಸಪ್ತಮಾಧಿಪತಿಯ ಬಲಾಬಲ ಹಾಗೂ ಸಪ್ತಮಸ್ಥಾನದಲ್ಲಿರುವ ಗ್ರಹಗಳು ಮತ್ತು ಈ ಸ್ಥಾನದ ಮೇಲಿರುವ ಇತರ ಗ್ರಹಗಳ ದೃಷ್ಟಿ ಇವುಗಳನ್ನೆಲ್ಲ ನೋಡಬೇಕು. ಇವೆಲ್ಲವೂ ಸ್ವಭಾವಕ್ಕೆ ಅನುಗುಣವಾಗಿರುವ ಮೂಲಕ ಗ್ರಹಗಳ ಸ್ವಭಾವಗಳನ್ನು ಮೊದಲು ವಿವರಿಸ ಲಾಗಿದೆ.

### ರವಿ

ಅಧಿಕಾರಿ, ನಿರ್ಭಿಡೆಯಾದವ, ನಿಷ್ಠುರಿ, ನಿಷ್ಕಪಟಿ, ಎಲ್ಲರ ಮೇಲೂ ದರ್ಪ ನಡೆಸುವ ಬಯಕೆಯುಳ್ಳವ, ಉದಾರಿ, ನಿರ್ವ್ಯಸನಿ, ಕರ್ತವ್ಯ ದಕ್ಷ, ಶ್ರೀಮಂತರಂತೆ ವ್ಯವಹರಿಸುವವ, ರಾಜಕಾರಣ, ರಾಜಕೀಯದಲ್ಲಿ ಅಭಿ ಲಾಷೆ ಉಳ್ಳವ. ಇನ್ನು ರೂಪದಿಂದ ಮಧ್ಯಮವಾಗಿದ್ದು, ದುಂಡನ್ನ ಮೋರೆ ವಿಶಾಲವಾದ ಕಣ್ಣುಗಳು, ಹರವಾದ ಹಣೆ, ದೃಢ ಶರೀರವುಳ್ಳವ ಉಷ್ಣ ಪ್ರಕೃತಿಯವನು.

## ಚಂದ್ರ

ಗೌರವರ್ಣ, ಚತುರ, ವಿಲಾಸಪ್ರಿಯ, ಮಧುರಭಾಷಿ, ಸಂಚಾರಿ ಅವಿಚಾರಿ, ಲೋಕಪ್ರಿಯ, ಸಭಾಪ್ರಿಯ; ಜಲಪ್ರಿಯ.

## (ಕುಜ) ಮಂಗಳ

ಶೀಘ್ರಕೋಪಿ, ನಿರ್ಭೀಡೆಯುದವ, ನಿಷ್ಠುರಿ, ತಮೋಗುಣಿ, ಸಾಹಸಿ, ಧೈರ್ಯಶಾಲಿ, ಸ್ವಾವಲಂಬಿ, ತಾಂತ್ರಿಕ ಜ್ಞಾನಿ, ಉಷ್ಣ ಪ್ರಕೃತಿಯುಳ್ಳವ ಅಸುಖಿ, ಮಿತಭಾಷಿ, ಅಭಿಮಾನಿ.

## ಬುಧ

ಸೌಮ್ಯಸ್ವಭಾವಿ, ಬುದ್ಧಿವಂತ, ನಿಗರ್ವಿ, ಭಾಷಣಕಾರ, ಪರೋಪಕಾರಿ ಹಾಗೂ ಸ್ವಾರ್ಥಿ, ಮಿತ್ರಸುಖಿ, ಸ್ವತಂತ್ರ ಉದ್ಯೋಗಿ, ಗ್ರಂಥಕಾರ, ವಾಕ್‌ಚತುರ, ವ್ಯವಹಾರ ಚತುರ, ಆಧ್ಯಾತ್ಮಿ, ಶಾಸ್ತ್ರೀಯ ವಿಷಯದಲ್ಲಿ ಪ್ರೇಮಿ, ಗುಟ್ಟುಳ್ಳವ.

## ಗುರು

ಬುದ್ಧಿವಂತ, ವಿದ್ವಾಂಸ, ಪರೋಪಕಾರಿ, ಧಾರ್ಮಿಕ, ಸತ್ಯಭಾಷಿ, ನಿರ್ವ್ಯಸನಿ, ಆಧ್ಯಾತ್ಮಿಕ, ಶಾಂತತಾಪ್ರಿಯ, ಸರಳ ವ್ಯವಹಾರಿ, ಮಾರ್ಗದರ್ಶಿ, ಹಿತೈಷಿ, ಜನಪ್ರಿಯ, ಗೌರವವರ್ಣವುಳ್ಳವ.

## ಶುಕ್ರ

ವಿಲಾಸಿ, ಕಲಾಕುಶಲ, ಸ್ವತಂತ್ರಪ್ರವೃತ್ತಿಯುಳ್ಳವ, ಸರ್ವಸುಖೋಪಭೋಗಿ, ಪ್ರಾಪಂಚಿಕ, ವಸ್ತ್ರಾಲಂಕಾರಿ, ಕಾಮುಕ, ಮಧುರ-ಮೃದುಭಾಷಿ ಆನಂದ ಪ್ರವರ್ತ್ತಿಯುವ, ದುಂದುಗಾರ, ದೈವಭಕ್ತ.

## ಶನಿ

ಶ್ರಮಜೀವಿ, ತತ್ವಜ್ಞಾನಿ, ಧಾರ್ಮಿಕ, ಏಕಾಂತವಾಸಿ, ನೀಲವರ್ಣದವ, ವಾತಪ್ರಕೃತಿಯುವ.

## ರಾಹು

ಗಾರುಡಿವಿದ್ಯೆ ಬಲ್ಲವ, ಜೂಜುಗಾರ, ಭೂತಬಾಧಾಪೀಡಿತ ಭೂತೋಚ್ಚಾಟಕ.

## ಕೇತು

ಮಂತ್ರ, ತಂತ್ರಜ್ಞ, ಅಜ್ಞೆಯ ಸುಖಿವುಳ್ಳವ, ವೇದಾಂತಿ.

## ಗ್ರಹಗಳ ಉದ್ಯೋಗ ಮತ್ತು ಸ್ವಭಾವ

**ರವಿ** :—ನ್ಯಾಯಾಧೀಶ, ರಾಜಕೀಯಪಟು. ರೈಲ್ವೆ ಇಲ್ಲವೆ ಫಾರೆಸ್ಟ ಖಾತೆಯಲ್ಲಿ ಕೆಲಸಮಾಡುವವ...ಅಧಿಕಾರಿ.

**ಚಂದ್ರ** :—ಪಡಗು, ದೋಣಿಯಲ್ಲಿಯ ಕೆಲಸಗಾರ, ನೌಕರದಾರ, ಕಲಾಪ್ರೀಯ, ಉತ್ತಮ ಭಾಷಣಕಾರ, ಚಂಚಲ ಮನೋವೃತ್ತಿಯವ.

**ಕುಜ** :—ಡಾಕ್ಟರ, ವಕೀಲ, ಇಂಜನೀಯರ, ಪೋಲಿಸ್ ಅಧಿಕಾರಿ, ಮಿಲಿಟರಿ ಅಧಿಕಾರಿ, ತಾಂತ್ರಿಕ ವಿಜ್ಞಾನಿ, ವಿದ್ಯುತ್ ಖಾತೆಯಲ್ಲಿ ಕೆಲಸಗಾರ, ಸಂಶೋಧಕ, ವೈಮಾನಿಕ (out door executive worker)

**ಬುಧ** :—ಗ್ರಂಥಕಾರ, ಸಂಪಾದಕ, ಜ್ಯೋತಿಷಿ, ವ್ಯಾಪಾರಿ, ಪೋಸ್ಟ ಖಾತೆ, ಅಧ್ಯಾಪಕ, ಭಾಷಣಕಾರ.

**ಗುರು** :—ಧಾರ್ಮಿಕ ಉಪದೇಶಕ, ಶಿಕ್ಷಕ, ನ್ಯಾಯಾಧೀಶ, ಮಂತ್ರಿ ನಾಮಮಾತ್ರದ ಅಧಿಕಾರಿ (ಅಧ್ಯಕ್ಷ ಆದಿ).

**ಶುಕ್ರ** :—ಕಲಾನಿಪುಣ, ಸ್ವತಂತ್ರ ಉದ್ಯೋಗಿ, ಸರಾಫ, ವಸ್ತ್ರದ ವ್ಯಾಪಾರಿ, ಸುಗಂಧ ದ್ರವ್ಯದ ವ್ಯಾಪಾರಿ, ಪ್ರಕಾಶಕ, ಜ್ಯೋತಿಷಿ, ವ್ಯಸನಿ.

**ಶನಿ** :—ನ್ಯಾಯಾಧೀಶ, ತತ್ವಜ್ಞಾನಿ, ಶ್ರಮಜೀವಿ, ಸಾರ್ವಜನಿಕ ಖಾತೆಯಲ್ಲಿರುವವ, ಒಕ್ಕಲುತನದ ಖಾತೆಗೆ ಸಂಬಂಧಿಸಿದವ, ಧಾರ್ಮಿಕ, ಮಾನಸ ಶಾಸ್ತ್ರಜ್ಞ, ತರ್ಕಶಾಸ್ತ್ರಜ್ಞ, ಯಾವುದೇ ವಿಷಯದ ಬಗೆಗೆ ಆಳವಾಗಿ ವಿಚಾರಿಸುವವ, ಎಣ್ಣೆಯ ವ್ಯಾಪಾರಿ.

**ರಾಹು-ಕೇತು :—** ಜೂಜುಗಾರ, ಪೋಲಿಸ್ ಖಾತೆ, ತಾಂತ್ರಿಕ ಮಾಟಗಾರ, ಗಾರುಡಿಗ.

ವಿಶೇಷ ಸೂಚನೆ ; — ಗ್ರಹಗಳ ಉದ್ಯೋಗದ ವಿಷಯದ ಬಗೆಗೆ ನಮ್ಮ **"ಉದ್ಯೋಗ ಜ್ಯೋತಿಷ್ಯ"** ಗ್ರಂಥದಲ್ಲಿ ವಿವರವಾಗಿ ವಿವೇಚಿಸಲಾಗಿದೆ.

ಜನ್ಮಕುಂಡಲಿಯಿಂದ ವಿವಾಹವು ಎಂದು ಆಗುವದು ? ಬೇಗನೆ ಅಥವಾ ತಡವಾಗಿ ಆಗುವುದೋ ಹೇಗೆ ?—ಎಂಬುದನ್ನು ಇಲ್ಲಿ ವಿವರಿಸಿದೆ.

(೧) ವಿವಾಹದ ವಿಚಾರ ಮಾಡುವಾಗ ಮುಖ್ಯತಃ ಸಪ್ತಮಸ್ಥಾನ, ಸಪ್ತಮಾಧಿಪತಿ; ಲಗ್ನ ಹಾಗೂ ಲಗ್ನಾಧಿಪತಿ; ಪಂಚಮ ಹಾಗೂ ಪಂಚಮಾಧಿಪತಿ; ನವಮ, ನವಮಾಧಿಪತಿ; ಇವರ ಬಲಾಬಲವನ್ನು ವಿಚಾರಿಸಬೇಕು.

(೨) ಸಪ್ತಮಸ್ಥಾನಭಾವದ ಕಾರಕಗ್ರಹವಾದ ಶುಕ್ರನ ಬಲಾಬಲವನ್ನು ವಿಚಾರಿಸಬೇಕು.

(೩) ಜನ್ಮಕುಂಡಲಿಯಲ್ಲಿ ಸಪ್ತಮಸ್ಥಾನದಲ್ಲಿ ಪಾಪಗ್ರಹಗಳಿದ್ದು, ಲಗ್ನಾಧಿಪತಿ, ಪಾಪಗ್ರಹಯುಕ್ತ, ಪಾಪಗ್ರಹದೃಷ್ಟ ಅಥವಾ ನಿರ್ಬಲಿ, ಸಪ್ತಮಸ್ಥಾನದ ಮೇಲೆ ಪಾಪಗ್ರಹಗಳ ದೃಷ್ಟಿ, ಶುಕ್ರ-ಚಂದ್ರರು ಪಾಪ ಗ್ರಹಗಳೊಂದಿಗಿನ ಯುತಿ ಅಥವಾ ಅವರ ನಿರ್ಬಲತೆ— ಹೀಗೆ ಇದ್ದರೆ ವಿವಾಹವು ತಡವಾಗಿ ಆಗುವದು.

(೪) ಸಪ್ತಮಾಧಿಪತಿ ಶನಿಯುಕ್ತನಾಗಿ ೬-೮-೧೨ ನೆಯ ಸ್ಥಾನಗಳಲ್ಲಿ ಇದ್ದರೆ ವಿವಾಹಕ್ಕೆ ತೊಂದರೆ ಹೆಚ್ಚು.

(೫) ಸಪ್ತಮದಲ್ಲಿ ರಾಹು ಅಥವಾ ಶನಿ ಇದ್ದು, ಸಪ್ತಮೇಶ ನಿರ್ಬಲನಾಗಿ ಇದ್ದರೆ, ಅಥವಾ ಸಪ್ತಮದ ಮೇಲೆ ಶನಿ-ಮಂಗಳರ ದೃಷ್ಟಿ ಇದ್ದರೆ ವಿವಾಹಕ್ಕೆ ತೊಂದರೆ ಹೆಚ್ಚು.

(೬) ಶುಕ್ರ ಹಾಗೂ ಸಪ್ತಮೇಶ, ಲಗ್ನೇಶ ವಕ್ರಿ ಇದ್ದು, ಚಂದ್ರ-ಮಂಗಳರ ಯೋಗ ಅಥವಾ ಚಂದ್ರ-ಶನಿ ಯೋಗ ಇದ್ದರೆ ವಿವಾಹವು ತಡವಾಗಿ ಆಗುವದು.

(೭) ಸಪ್ತಮಸ್ಥಾನದಲ್ಲಿ ಪಾಪಗ್ರಹಗಳೇ ಬಹಳವಿದ್ದು, ಗುರು-ಶುಕ್ರರು ಸಪ್ತಮದ ಮೇಲೆ ದೃಷ್ಟಿರಹಿತರಾಗಿ ಇದ್ದರೆ ವಿವಾಹವು ತಡವಾಗಿ ಆಗುವದು.

(೮) ಸಪ್ತಮೇಶ ಅಥವಾ ಸಪ್ತಮಸ್ಥಾನದಲ್ಲಿದ್ದ ಗ್ರಹವು, ಅಸ್ತ, ವಕ್ರೀ, ಶತ್ರುಕ್ಷೇತ್ರಿ, ನೀಚ ಅಥವಾ ಪಾಪಗ್ರಹಯುತವಿದ್ದರೆ ವಿವಾಹಕ್ಕೆ ತೊಂದರೆ ಹೆಚ್ಚು.

(೯) ಸಪ್ತಮದಲ್ಲಿ ರವಿ-ಶನಿ ಅಥವಾ ಶನಿ-ಮಂಗಳರ ಯುತಿಯು ಇದ್ದರೆ ವಿವಾಹವು ತಡವಾಗಿ ಆಗುವದು.

(೧೦) ಲಗ್ನದಲ್ಲಿ ರವಿ-ಶನಿ ಅಥವಾ ಶನಿ-ಮಂಗಳರ ಯುತಿ ಇದ್ದು ಸಪ್ತಮೇಶ ನಿರ್ಬಲನಿದ್ದರೆ, ವಿವಾಹಕ್ಕೆ ತೊಂದರೆ ಹೆಚ್ಚು.

(೧೧) ಸಪ್ತಮದಲ್ಲಿ ಮಂಗಳ ಮತ್ತು ಪಂಚಮದಲ್ಲಿ ಶನಿ ಇದ್ದರೆ ವಿವಾಹವು ತಡವಾಗಿ ಆಗುವುದು.

(೧೨) ಲಗ್ನ, ಚತುರ್ಥ, ಸಪ್ತಮ, ಅಷ್ಟಮ, ವ್ಯಯ ಈ ಯಾವುದೇ ಐದು ಸ್ಥಾನದಲ್ಲಿ ಬಲಾಢ್ಯ ಕುಜನಿದ್ದರೆ ವಿವಾಹವು ತಡವಾಗಿ ಆಗುವದು.

(೧೩) ಲಗ್ನ, ಪಂಚಮ, ಸಪ್ತಮ, ಅಷ್ಟಮ, ದಶಮ, ಏಕಾದಶ ಈ ಯಾವುದೇ ಆರು ಸ್ಥಾನಗಳಲ್ಲಿ ಶನಿ ಹಾಗೂ ರಾಹುಗಳಿದ್ದು, ಸಪ್ತಮಾಧಿಪತಿ ನಿರ್ಬಲ ಮತ್ತು ಗುರುವಿನ ದೃಷ್ಟಿ ಸಪ್ತಮದ ಮೇಲೆ ಇಲ್ಲದಿದ್ದರೆ ವಿವಾಹಕ್ಕೆ ತೊಂದರೆ ಇರುತ್ತದೆ.

(೧೪) ಶನಿ-ಮಂಗಳರು ಸಮಸಪ್ತಕರಾಗಿ ಲಗ್ನ, ಸಪ್ತಮ, ಪಂಚಮ ಏಕಾದಶಗಳಿದ್ದರೆ ವಿವಾಹ ತಡವಾಗಿ ಆಗುವುದು.

(೧೫) ಚತುರ್ಥದಲ್ಲಿ ಕುಜನು ಹಾಗೂ ದಶಮದಲ್ಲಿ ಶನಿಯೂ ಬಲಾಢ್ಯರಾಗಿದ್ದು ಗುರುವಿನ ದೃಷ್ಟಿ ಸಪ್ತಮದ ಮೇಲೆ ಇಲ್ಲದೆ ಇರುವಿಕೆ, ಸಪ್ತಮೇಶ ನಿರ್ಬಲ ಇರುವುದು. ಈ ಯೋಗವಿದ್ದರೆ ವಿವಾಹಕ್ಕೆ ತೊಂದರೆ ಹೆಚ್ಚು.

(೧೬) ಪಂಚಮದಲ್ಲಿ ಶನಿ, ವ್ಯಯಸ್ಥಾನದಲ್ಲಿ ಕುಜ ಇದ್ದು ಸಪ್ತಮೇಶ ನಿರ್ಬಲ ಹಾಗೂ ಗುರು-ಶುಕ್ರರ ದೃಷ್ಟಿ ಸಪ್ತಮದಲ್ಲಿರದೇ ಇದ್ದರೆ ವಿವಾಹವು ತಡವಾಗಿ ಆಗುವದು.

(೧೭) ಸಪ್ತಮಾಧಿಪತಿಯು ಅನುದಿತ ಗೋಲಾರ್ಧದಲ್ಲಿದ್ದು ಅಸ್ತಂಗತನಾಗಿದ್ದರೆ ವಿವಾಹ ತಡವಾಗಿ ಆಗುವದು.

(೧೮) ರವಿ-ಶನಿಗಳು ಸಮಸಪ್ತಕರಾಗಿ, ಲಗ್ನ ಸಪ್ತಮದಲ್ಲಿದ್ದರೆ ವಿವಾಹಕ್ಕೆ ತೊಂದರೆ ಹೆಚ್ಚು.

(೧೯) ಸಪ್ತಮಾಧಿಪತಿಯು ಎರಡು ಪಾಪಗ್ರಹಗಳ ಮಧ್ಯದಲ್ಲಿದ್ದರೆ ವಿವಾಹವು ತಡವಾಗಿ ಆಗುವದು.

(೨೦) ಸಪ್ತಮಾಧಿಪತಿಯಾದ ಚಂದ್ರನು ಕ್ಷೀಣನಾಗಿ ಷಷ್ಠದಲ್ಲಿದ್ದು ಶನಿ-ರಾಹು ಸಪ್ತಮದಲ್ಲಿದ್ದರೆ, ವಿವಾಹ ತಡವಾಗಿ ಆಗುವದು.

(೨೧) ಯಾವುದೇ ಜಾತಕನ ಜಾತಕದಲ್ಲಿ ಚತುರ್ಗ್ರಹ, ಪಂಚಗ್ರಹ-ಷಷ್ಠಗ್ರಹ ಯೋಗಗಳು ಚತುರ್ಥ, ಪಂಚಮ, ಲಗ್ನ, ಸಪ್ತಮ, ಭಾಗ್ಯ ಈ ಯಾವದೇ ಸ್ಥಾನದಲ್ಲಿದ್ದರೆ ವಿವಾಹಕ್ಕೆ ವಿಘ್ನವು.

(೧) ಉಚ್ಚ ಅಥವಾ ಸ್ವಕ್ಷೇತ್ರಿ ಶುಕ್ರನು ಬಲವಂತನಾಗಿ ಲಗ್ನದಲ್ಲಿದ್ದು ಬಲಾಢ್ಯ ಚಂದ್ರನು ಸಪ್ತಮದಲ್ಲಿದ್ದರೆ ವಿವಾಹವು ತೀವ್ರ ಆಗುತ್ತದೆ.

(೨) ಉಚ್ಚ ಅಥವಾ ಸ್ವಕ್ಷೇತ್ರಿಗುರುವು ಲಗ್ನದಲ್ಲಿದ್ದು, ಸಪ್ತಮದಲ್ಲಿ ಬಲಾಢ್ಯ ಚಂದ್ರನಿದ್ದರೆ, ವಿವಾಹ ಚಿಕ್ಕ ವಯಸ್ಸಿನಲ್ಲಿ ಆಗುತ್ತದೆ.

(೩) ಬಲಾಢ್ಯ ಗುರು-ಚಂದ್ರರ ಸಮಸಪ್ತಕವು ಲಗ್ನ-ಸಪ್ತಮ; ಪಂಚಮ-ಏಕಾದಶ; ತೃತೀಯ—ನವಮಗಳಿದ್ದರೆ ವಿವಾಹ ತೀವ್ರವೇ ಆಗುತ್ತದೆ.

(೪) ಲಗ್ನ, ತೃತೀಯ, ಪಂಚಮ, ಸಪ್ತಮ, ನವಮ, ಏಕಾದಶ ಈ ಯಾವುದೇ ಆರು ಸ್ಥಾನಗಳಲ್ಲಿ ಬಲಾಢ್ಯ ಗುರುವಿದ್ದು, ಸಪ್ತಮಾಧಿಪತಿ ಬಲಾಢ್ಯನಿದ್ದರೆ ವಿವಾಹಯೋಗ ತೀವ್ರವಿರುತ್ತದೆ.

(೫) ಸಪ್ತಮಾಧಿಪತಿಯು ಬಲಾಢ್ಯ ಗುರು ಅಥವಾ ಬಲಾಢ್ಯ ಶುಕ್ರನೊಂದಿಗೆ ಅಂಶಾತ್ಮಕವಾಗಿ ಯುತಿಯೋಗ ಇದ್ದರೆ, ವಿವಾಹ ಕಾಲ ತೀವ್ರ ಇರುತ್ತದೆ.

(೬) ಕುಜ ಹಾಗೂ ಶನಿ ಇವರ ದೃಷ್ಟಿಯು ಸಪ್ತಮದಲ್ಲಿರದಿದ್ದರೆ ವಿವಾಹವು ತೀವ್ರ ಆಗುತ್ತದೆ.

(೭) ಸಪ್ತಮಾಧಿಪತಿ ಬಲಾಢ್ಯನಿದ್ದು ಸಪ್ತಮ, ಲಗ್ನ, ಪಂಚಮ, ನವಮ ಈ ಸ್ಥಾನದಲ್ಲಿದ್ದರೆ ವಿವಾಹವು ಶೀಘ್ರವಾಗುತ್ತದೆ.

(೮) ಸಪ್ತಮದಲ್ಲಿ ಅಥವಾ ಲಗ್ನದಲ್ಲಿ ಬಲಾಢ್ಯ ಶುಕ್ರ ಅಥವಾ ಗುರುವು ಇದ್ದರೆ ವಿವಾಹವು ಶೀಘ್ರವಾಗಿ ಜರುಗುವದು.

(೯) ರವಿ ಹಾಗೂ ಶುಕ್ರರು ಬಲಾಢ್ಯರಿದ್ದರೆ, ಯಾವುದೇ ಗ್ರಹಗಳು ಅನುಕೂಲವಿಲ್ಲದಿದ್ದರೂ ವಿವಾಹವು ಶೀಘ್ರವಾಗುವದು.

(೧೦) ಚಂದ್ರ ಹಾಗೂ ಗುರು ಇವರ ಪೂರ್ಣ ಶುಭದೃಷ್ಟಿಯು ಪಂಚಮ ಅಥವಾ ಸಪ್ತಮದಲ್ಲಿದ್ದು, ಪಾಪಗ್ರಹ ಯೋಗವಿಲ್ಲದಿದ್ದರೆ, ವಿವಾಹವು ಶೀಘ್ರವಾಗುವದು.

(೧೧) ಲಗ್ನ, ಸಪ್ತಮದಲ್ಲಿ ಶುಭಗ್ರಹವಿದ್ದು, ಲಗ್ನಾಧಿಪತಿ, ಸಪ್ತಮಾಧಿಪತಿ ಇವರು ಶುಭಗ್ರಹದೊಂದಿಗೆ ಅಥವಾ ಶುಭಗ್ರಹದೃಷ್ಟರು ಇದ್ದು ಪಂಚಮ-ನವಮಸ್ಥಾನದಲ್ಲಿದ್ದರೆ, ವಿವಾಹವು ಶೀಘ್ರವಾಗುವುದು.

(೧೨) ಉಚ್ಚ ಅಥವಾ ಸ್ವಕ್ಷೇತ್ರಿ ಶುಕ್ರನು ಭಾಗ್ಯಸ್ಥಾನದಲ್ಲಿದ್ದರೆ, ವಿವಾಹವು ಶೀಘ್ರವಾಗುವುದಲ್ಲದೆ, ವಿವಾಹದ ನಂತರ ಭಾಗ್ಯೋದಯವು.

(೧೩) ಉಚ್ಚ ಶುಕ್ರನು ಸಪ್ತಮದಲ್ಲಿ ಅಥವಾ ಲಗ್ನದಲ್ಲಿದ್ದರೆ ವಿವಾಹವು ಶೀಘ್ರವಾಗುತ್ತದೆ.

(೧೪) ಲಗ್ನಾಧಿಪತಿ ಅಥವಾ ಸಪ್ತಮಾಧಿಪತಿಯಾದ ಶುಕ್ರನು ಗುರು-ಚಂದ್ರರೊಂದಿಗೆ ಸಮಸಪ್ತಕ ಇಲ್ಲವೆ ನವಪಂಚಮ ಯೋಗ ಮಾಡುತ್ತಿದ್ದರೆ ವಿವಾಹವು ಶೀಘ್ರವಾಗಿ ಜರುಗುತ್ತದೆ.

(೧೫) ಉಚ್ಚನಾದ ಗುರುವು ಚಂದ್ರನೊಂದಿಗೆ ಸಪ್ತಮದಲ್ಲಿದ್ದರೆ ವಿವಾಹವು ಶೀಘ್ರವಾಗುತ್ತದೆ.

(೧೬) ಉಚ್ಚ ಶುಕ್ರನು ಚಂದ್ರನೊಂದಿಗೆ ಲಗ್ನದಲ್ಲಿ ಅಥವಾ ಸಪ್ತಮದಲ್ಲಿದ್ದರೆ, ವಿವಾಹವು ಶೀಘ್ರವಾಗಿ ಆಗುತ್ತದೆ.

(೧೭) ಲಗ್ನದಲ್ಲಿ ಉಚ್ಚ ಶುಕ್ರನಿದ್ದು, ಗುರು-ಚಂದ್ರರು ಪಂಚಮದಲ್ಲಿದ್ದರೆ ವಿವಾಹವು ಶೀಘ್ರವಾಗುತ್ತದೆ.

(೧೮) ಸಪ್ತಮೇಶ ಹಾಗೂ ಶುಕ್ರ ಬಲಾಢ್ಯವಿದ್ದ ಜಾತಕನ ವಿವಾಹವು ಶೀಘ್ರ ಆಗುತ್ತದೆ.

(೧೯) ಬಲಾಢ್ಯ ಸಪ್ತಮೇಶ ಸಪ್ತಮದಲ್ಲಿಯೇ ಇರುವ ಜಾತಕನ ವಿವಾಹವು ತೀವ್ರ ಆಗುತ್ತದೆ.

(೨೦) ಬಲಾಢ್ಯ ಸಪ್ತಮೇಶನು ಉದಿತಗೋಲಾರ್ಧದಲ್ಲಿದ್ದು, ಮಂಗಳ ಶನಿ, ರಾಹುಗಳ, ದೃಷ್ಟಿ ಸಪ್ತಮಸ್ಥಾನದ ಮೇಲೆ ಇಲ್ಲದಿರುವ ಜಾತಕನ ವಿವಾಹವು ತೀವ್ರ ಆಗುತ್ತದೆ.

ವಿವಾಹವು ತೀವ್ರವಾಗಿ ಅಥವಾ ತಡವಾಗಿ ಆಗುವ ಬಗ್ಗೆ ಈ ವರೆಗೆ ವಿವರಿಸಿದುದಾಯಿತು. ಇನ್ನು ವಿವಾಹವು ಯಾವ ವರ್ಷದಲ್ಲಿ ಜರುಗುವದು ? ಎಂಬ ಬಗ್ಗೆ ವಿಚಾರಿಸುವಾಗ, ಮುಖ್ಯವಾಗಿ ೫-೬ ಸಂಗತಿಗಳನ್ನು ಲಕ್ಷ್ಯದಲ್ಲಿ ಇಡಬೇಕು.

## ವಿವಾಹಯೋಗದ ವರ್ಷಗಳು

(೧) ಜನ್ಮಕುಂಡಲಿಯಲ್ಲಿದ್ದ ಗ್ರಹಗಳ ಬಲಾಬಲ; (೨) ಗೋಚರೀ ರವಿ, ಗುರು, ಶುಕ್ರರ ಬಲಾಬಲ; (೩) ಜನ್ಮಕುಂಡಲಿಯ ಮೇಲಿಂದ ಗೋಚರೀ ಗ್ರಹಗಳ ಪರಿಭ್ರಮಣ; (೪) ಗ್ರಹಗಳ ದಶಾ-ಅಂತರ್ದಶಾ; (೫) ಪಂಚಮ ಹಾಗೂ ಸಾಡೇಸಾತೀ ಶನಿ; (೬) ವಿವಾಹದ ಮಾಸಗಳಲ್ಲಿಯ ಗ್ರಹಗಳ ಬಲಾಬಲ.

(i) ಗೋಚರಿಯಿಂದ ಗುರುವು ೨-೫-೭-೯-೧೦-೧೧ ನೆಯವನಾಗಿ ಬಂದರೆ ಶುಭ ಫಲವನ್ನು ಕೊಡುವನು.

(ii) ರವಿಯು ಗೋಚರಿಯಿಂದ ೩-೬-೧೦-೧೧ ನೇಯವನಾಗಿ ಬಂದರೆ ಶುಭನು.

(iii) ಗೋಚರಿಯಿಂದ ಶುಕ್ರನು ೧-೨-೩-೪-೫-೭-೯-೧೦-೧೧-೧೨ ಸ್ಥಾನಗಳಲ್ಲಿ ಬಂದರೆ ಒಳ್ಳೆಯವನು (ಶುಭ ಫಲದಾಯಕನು).

ಜನ್ಮಸ್ಥ ಗುರು, ಜನ್ಮಸ್ಥ ಶುಕ್ರ, ಜನ್ಮಸ್ಥ ಚಂದ್ರ ಈ ಗ್ರಹಗಳ ಮೇಲೆ ಗೋಚರೀ ಗುರುವಿನ ಪರಿಭ್ರಮಣವಿರಬೇಕು.

(೧) ಗುರು, ಶುಕ್ರ, ಚಂದ್ರ ಈ ಗ್ರಹಗಳ ಸಪ್ತಮಸ್ಥಾನದಲ್ಲಿ ಗುರುವಿನ ಭ್ರಮಣವಿರಬೇಕು.

(೨) ಜನ್ಮಕುಂಡಲಿಯಲ್ಲಿ ಲಗ್ನ, ದ್ವಿತೀಯ, ಚತುರ್ಥ, ಪಂಚಮ,

ನವಮ, ದಶಮ ಈ ಸ್ಥಾನಗಳ ಅಧಿಪತಿಯು, ಗುರು, ಶುಕ್ರ, ಚಂದ್ರರಿದ್ದು ಗೋಚರೀ ಗುರುವಿನ ಪರಿಭ್ರಮಣವು ಆ ಸ್ಥಾನದ ಮೇಲೆ ಇರಬೇಕು.

(೩) ಜನ್ಮಕುಂಡಲಿಯಲ್ಲಿ ಗುರು, ರವಿ, ಶುಕ್ರರು, ಲಗ್ನಾಧಿಪತಿ ಅಥವಾ ಸಪ್ತಮಾಧಿಪತಿ ಅಥವಾ ಪಂಚಮಾಧಿಪತಿ, ನವಮಾಧಿಪತಿಗಳಿದ್ದು, ಗೋಚರೀ ಗುರುವಿನೊಂದಿಗೆ ಶುಭಯೋಗ ಮಾಡುತ್ತಿರುವಾಗ ವಿವಾಹ ಕಾಲವಿರುತ್ತದೆ.

(೪) ಕುಂಡಲಿಯಲ್ಲಿಯ ಜನ್ಮಸ್ಥ ಶುಕ್ರನಿಂದ ಸಪ್ತಮ ದ್ವಿತೀಯ, ಪಂಚಮ, ನವಮ ಈ ಸ್ಥಾನಗಳಲ್ಲಿ ಗೋಚರೀ ಶುಕ್ರನು ಬಂದರೆ ಒಳ್ಳೆಯ ವಿವಾಹಕಾಲ ಇರುತ್ತದೆ.

(೫) ಚಂದ್ರನಿಂದ ಸಪ್ತಮದಲ್ಲಿ ಗೋಚರೀ ಶುಕ್ರನು ಬಂದರೆ ವಿವಾಹ ಕಾಲ ಇರುತ್ತದೆ.

(೬) ಜನ್ಮಕುಂಡಲಿಯಲ್ಲಿ ಉಚ್ಚ ಚಂದ್ರನು ಸಪ್ತಮದಲ್ಲಿದ್ದು ಗೋಚರೀ ಶುಕ್ರನು ಸಪ್ತಮದಲ್ಲಿ ಬಂದರೆ ವಿವಾಹವು ಜರುಗುವುದು.

(೭) ಲಗ್ನದಲ್ಲಿ ಅಥವಾ ಸಪ್ತಮದಲ್ಲಿ ಚಂದ್ರನಿದ್ದು, ಗೋಚರೀ ಗುರುವಿನ ಭ್ರಮಣವು ಚಂದ್ರನ ಮೇಲಿಂದ ಅಂಶಾತ್ಮಕ ಅಥವಾ ಸಮಸಪ್ತಕವಿದ್ದರೆ ವಿವಾಹಕ್ಕೆ ಒಳ್ಳೆಯದು.

(೮) ಸಪ್ತಮೇಶನು ಯಾವ ಸ್ಥಾನದಲ್ಲಿರುವನೋ ಅಥವಾ ಯಾವ ನವಾಂಶದಲ್ಲಿರುವನೋ ಅವನ ತ್ರಿಕೋನದಲ್ಲಿ ಗುರುವಿನ ಭ್ರಮಣವಾಗುತ್ತಿದ್ದರೆ ವಿವಾಹ ಕಾಲ ಬರುತ್ತದೆ.

(೯) ಗುರು, ಚಂದ್ರ ಹಾಗೂ ಶುಕ್ರ ಇವರಲ್ಲಿ ಯಾರು ಬಲಿಷ್ಠರಾಗಿ ಇರುವರೋ, ಇವರ ದಶಾ–ಅಂತರ್ದಶೆಯಲ್ಲಿ ವಿವಾಹಕಾಲ ಇರುತ್ತದೆ.

(೧೦) ಸಪ್ತಮೇಶನು ಶುಕ್ರನೊಂದಿಗೆ ಇದ್ದರೆ, ಅವನ ದಶಾ ಅಂತರ್ದಶೆಯಲ್ಲಿ ವಿವಾಹವು ಜರುಗುವುದು.

(೧೧) ಸಪ್ತಮಾಧಿಪತಿಯು ದಶಾ–ಅಂತರ್ದಶೆಯಲ್ಲಿ ವಿವಾಹಕಾಲ ಬರುತ್ತದೆ.

(೧೨) ಜನ್ಮಕುಂಡಲಿಯಲ್ಲಿ ಕುಟುಂಬಾಧಿಪತಿಯು ಯಾವ ರಾಶಿಯಲ್ಲಿರುವನೋ ಅವನ ದಶಾ-ಅಂತರ್ದಶೆಯಲ್ಲಿ ವಿವಾಹಕಾಲ ಬರುತ್ತದೆ.

(೧೩) ಸಪ್ತಮೇಶನೊಂದಿಗಿರುವ ದಶಾ–ಅಂತರ್ದಶೆಯಲ್ಲಿ ವಿವಾಹ ಕಾಲ ಬರುತ್ತದೆ.

(೧೪) ಜನ್ಮಕುಂಡಲಿಯಲ್ಲಿ ಲಗ್ನೇಶ ಪಂಚಮೇಶ. ಭಾಗ್ಯೇಶ ಇವರಲ್ಲಿ ಬಲಿಷ್ಠನಾಗಿ ಇರುವ ಗ್ರಹದ ದಶಾ. ಅಂತರ್ದಶೆಯಲ್ಲಿ ವಿವಾಹಕಾಲ ಬರುತ್ತದೆ.

(೧೫) ಸಪ್ತಮಸ್ಥಾನದಲ್ಲಿರುವ ಶುಭಗ್ರಹದ ದಶಾ–ಅಂತರ್ದಶೆಯಲ್ಲಿ ವಿವಾಹಕಾಲ ಬರುತ್ತದೆ.

(೧೬) ಗುರು, ಶುಕ್ರ, ಚಂದ್ರರ ದಶಾ–ಅಂತರ್ದಶೆಯಲ್ಲಿ ವಿವಾಹ ಕಾಲ ಬರುತ್ತದೆ.

(೧೭) ಲಗ್ನೇಶ, ಪಂಚಮೇಶ, ಸಪ್ತಮೇಶ, ಭಾಗ್ಯೇಶ ಇವರೊಂದಿಗೆ ಗೋಚರೀ ಗುರುವು ಯೋಗವಾಡುತ್ತಿದ್ದಾಗ ವಿವಾಹ ಕಾಲ ಬರುತ್ತದೆ.

(೧೮) ಲಗ್ನಕುಂಡಲಿಯಲ್ಲಿ ಗೋಚರೀ ಗುರುವಿನ ಪರಿಭ್ರಮಣವು ಲಗ್ನ, ತೃತೀಯ, ಪಂಚಮ, ಸಪ್ತಮ, ನವಮ, ಏಕಾದಶ ಈ ಸ್ಥಾನಗಳ ಮೇಲಿನಿಂದ ಆಗುತ್ತಿದ್ದಾಗ ವಿವಾಹಕಾಲ ಬರುತ್ತದೆ.

(೧೯) ಕುಂಡಲಿಯಲ್ಲಿ ಸ್ವಕ್ಷೇತ್ರಿ ಅಥವಾ ಉಚ್ಚ ಚಂದ್ರನು ಸಪ್ತಮದಲ್ಲಿದ್ದು, ಗೋಚರೀ ಗುರುವಿನ ಪರಿಭ್ರಮಣವು ಸಪ್ತಮದ ಮೇಲಿಂದ ಆಗುತ್ತಿದ್ದಾಗ ವಿವಾಹ ಕಾಲವಿರುವುದು.

(೨೦) ಜನ್ಮಕುಂಡಲಿಯಲ್ಲಿ ಸಪ್ತಮಾಧೀಶನು ಶುಭಗ್ರಹನಿದ್ದು ಸಪ್ತಮಾಧೀಶನ ಮೇಲಿಂದ ಗೋಚರೀ ಗುರುವಿನ ಪರಿಭ್ರಮಣ ಕಾಲದಲ್ಲಿ ವಿವಾಹ ಜರುಗುವದು.

(೨೧) ಲಗ್ನಕುಂಡಲಿಯಲ್ಲಿ. ಪಂಚಮ, ನವಮ. ಸಪ್ತಮ ಈ ಸ್ಥಾನಾಧಿಪತಿಗಳು ಗುರುವಿನ ಮಿತ್ರರಿದ್ದು, ಅವರ ಗೋಚರೀ ಪರಿಭ್ರಮಣವು ಇವರ ಮೇಲಿಂದ ಆಗುತ್ತಿದ್ದಾಗ ವಿವಾಹಕಾಲವು ಒದಗುವದು.

(೨೨) ಜನ್ಮಕುಂಡಲಿಯಲ್ಲಿ ಸ್ವಕ್ಷೇತ್ರೀ ಅಥವಾ ಉಚ್ಚ ಅಥವಾ ಮಿತ್ರ ಕ್ಷೇತ್ರೀ ಚಂದ್ರನು ಪಂಚಮ, ಲಗ್ನ, ಲಾಭ, ಸಪ್ತಮ, ನವಮದಲ್ಲಿದ್ದು ಗೋಚರೀ ಗುರುವಿನ ಪರಿಭ್ರಮಣ ಕಾಲದಲ್ಲಿ ವಿವಾಹ ಆಗುತ್ತದೆ.

(೨೩) ಸಾಡೇಸಾತಿ ಹಾಗೂ ಪಂಚಮ ಶನಿ ಇರುವ ಕಾಲದಲ್ಲಿ ವಿವಾಹಕ್ಕೆ ತೊಂದರೆ ಹೆಚ್ಚು.

(೨೪) ವಿವಾಹದಮಾಸಗಳಲ್ಲಿ ರವಿ, ಶುಕ್ರ, ಗುರು ಇವರು ಗೋಚರಿಯಿಂದ ಶುಭದಾಯಕರಿದ್ದಾಗ ವಿವಾಹಯೋಗ ಒದಗುತ್ತದೆ.

## ಪತಿ–ಪತ್ನಿಯರ ಜೀವನದ ಶುಭಾಶುಭ ಯೋಗಗಳು

(೧) ಸಪ್ತಮಸ್ಥಾನದಲ್ಲಿ ಮಕರ, ಕುಂಭರಾಶಿಗಳ ಗುರು, ಶನಿ, ರಾಹುಗಳಿದ್ದರೆ ಪತಿಯು ವಯಸ್ಸಾದವನು ಇರುತ್ತಾನೆ.

(೨) ಸಪ್ತಮಸ್ಥಾನದಲ್ಲಿ ಚಂದ್ರ, ಶುಕ್ರ, ಗುರುಗಳಿದ್ದು ಸಪ್ತಮಾಧಿಪತಿಯೊಂದಿಗೆ ಯೋಗ ಮಾಡುತ್ತಿದ್ದರೆ, ಪತಿ ಅಥವಾ ಪತ್ನಿಯರು ಸುಸ್ವರೂಪಿಗಳು, ಗೌರವರ್ಣದವರು, ಸುಸ್ವಭಾವಿ, ಅಂತಃಕರಣ, ಸದ್ಗುಣಿ, ಸಂಸಾರದಕ್ಷರೂ ಆಗಿರುತ್ತಾರೆ.

(೩) ದ್ವಿತೀಯ, ಚತುರ್ಥ, ಪಂಚಮ, ಸಪ್ತಮ, ದಶಮ ಈ ಸ್ಥಾನಗಳಲ್ಲಿ ಶುಭಯೋಗವಿದ್ದರೆ, ಪತಿಯ ಮನೆಯಲ್ಲಿ ಸೌಖ್ಯ ಸಿಗುತ್ತದೆ.

(೪) ಲಗ್ನಕುಂಡಲಿಯಲ್ಲಿ ಶುಕ್ರ–ಚಂದ್ರರು ಬಲಿಷ್ಠರಾಗಿ ಇದ್ದು ಸಪ್ತಮೇಶ, ಪಂಚಮೇಶ, ಲಗ್ನೇಶ, ಭಾಗ್ಯೇಶ ಇವರೊಂದಿಗೆ ಶುಭಸಂಬಂಧ ಇದ್ದರೆ ಅತ್ತೆಯ ಸೌಖ್ಯ ಸಿಗುತ್ತದೆ. ರವಿ-ಗುರುಗಳ ಶುಭಯೋಗವಿದ್ದರೆ ಮಾವನ ಸೌಖ್ಯ ಸಿಗುತ್ತದೆ.

(೫) ಲಗ್ನಾಧಿಪತಿ, ಚತುರ್ಥಾಧಿಪತಿ, ಭಾಗ್ಯಾಧಿಪತಿ, ದಶಮಾಧಿಪತಿ, ಇವರು ಕುಂಡಲಿಯಲ್ಲಿ ಎಷ್ಟು ಶುಭದಾಯಕರಾಗಿರುವರೋ, ಅಷ್ಟು ಸ್ಥಾವರ ಇಸ್ಟೇಟು, ನೌಕರ ಚಾಕರರ ಹಾಗೂ ವಾಹನ ಸೌಖ್ಯ ಸಿಗುತ್ತದೆ.

(೬) ಸಪ್ತಮೇಶನು ವಿದ್ಯಾಬುದ್ಧಿಕಾರಕ ಗ್ರಹಗಳೊಂದಿಗಿದ್ದು ಲಗ್ನಾಧಿಪತಿಯಿಂದ ದೃಷ್ಟಿಸಲ್ಪಡುತ್ತಿದ್ದರೆ, ಪತಿ ಅಥವಾ ಪತ್ನಿ ಸುಶಿಕ್ಷಿತರು, ಕರ್ತವ್ಯದಕ್ಷರು, ಹೆಚ್ಚು ಕಲಿತವರು ಇರುತ್ತಾರೆ.

(೭) ಸಪ್ತಮದಲ್ಲಿ ಬಲಾಢ್ಯ ಗುರು ಅಥವಾ ಬುಧರಿದ್ದರೆ, ಪತಿ–ಪತ್ನಿಯರು ಹೆಚ್ಚು ಕಲಿತವರೂ ಸುಶಿಕ್ಷಿತರೂ ಇರುತ್ತಾರೆ.

(೮) ಸಪ್ತಮಾಧಿಪತಿ ಚಂದ್ರ-ಶುಕ್ರರಿದ್ದು, ಭಾಗ್ಯೇಶ, ಧನೇಶ,

ಲಾಭೇಶ ಇವರೊಂದಿಗೆ ಶುಭಯೋಗವಿದ್ದರೆ, ಪತ್ನಿಯಿಂದ ದ್ರವ್ಯಲಾಭ ವಾಗುತ್ತದೆ.

(೯) ಜನ್ಮಕುಂಡಲಿಯಲ್ಲಿ ಅನೇಕ ಗ್ರಹಗಳು ಉದಿತ ಗೋಲಾರ್ಧ ದಲ್ಲಿದ್ದು, ಗುರು, ರವಿ, ಚಂದ್ರರು ದಶಮದಲ್ಲಿ ಬಲಾಢ್ಯರಿದ್ದರೆ ವಿವಾಹದ ತರುವಾಯ ಭಾಗ್ಯವೃದ್ಧಿ ಆಗುತ್ತದೆ.

(೧೦) ಸಪ್ತಮದಲ್ಲಿ ಬಲಾಢ್ಯ ಗುರು, ಶುಕ್ರ, ಚಂದ್ರರಿದ್ದರೆ ಪತಿ ಅಥವಾ ಪತ್ನಿ ಗೌರವರ್ಣದವರೂ ರೂಪಶಾಲಿಗಳೂ ಇರುತ್ತಾರೆ.

(೧೧) ಸಪ್ತಮದಲ್ಲಿ ಉಚ್ಚ ಗುರು ಇದ್ದರೆ, ಪತಿ–ಪತ್ನಿಯರು ಧರ್ಮ ನಿಷ್ಠೆಯುಳ್ಳವರಿರುತ್ತಾರೆ.

(೧೨) ಸಪ್ತಮದಲ್ಲಿ ಸ್ವಕ್ಷೇತ್ರೀ ಅಥವಾ ಉಚ್ಚ ಶುಕ್ರನಿದ್ದರೆ, ಪತಿ–ಪತ್ನಿಯರು ಕಲಾನಿಪುಣರಾಗಿ ಇರುತ್ತಾರೆ.

(೧೩) ಸಪ್ತಮಸ್ಥಾನದಲ್ಲಿ ಬಲಾಢ್ಯ ಶನಿ ಇದ್ದರೆ ಪತಿ–ಪತ್ನಿಯರು ಧಾರ್ಮಿಕರೂ, ತತ್ವಜ್ಞಾನದಲ್ಲಿ ಆಸಕ್ತಿಯುಳ್ಳವರೂ ಮಿತಭಾಷಿಗಳೂ ಕಪ್ಪುವರ್ಣದವರೂ ಇರುತ್ತಾರೆ.

(೧೪) ಸಪ್ತಮದಲ್ಲಿ ಬಲಾಢ್ಯ ರವಿ ಇದ್ದರೆ, ಪತಿ–ಪತ್ನಿಯರು ಶ್ರೀಮಂತರೂ ಅಧಿಕಾರಿ ವರ್ಗದವರೂ ರಾಜಕಾರಣಿಗಳೂ ಆಗಿರುತ್ತಾರೆ.

(೧೫) ಸಪ್ತಮದಲ್ಲಿ ಶನಿ–ಮಂಗಳರ ಅಥವಾ ಶನಿ-ರವಿಯರ ಯುತಿ ಇದ್ದರೆ ಪತಿ-ಪತ್ನಿಯರ ಸೌಖ್ಯ ಸಿಗಲಾರದು.

(೧೬) ಪುರುಷರ ಕುಂಡಲಿಯಲ್ಲಿ ರವಿಯು—ಸ್ತ್ರೀಯರ ಕುಂಡಲಿಯಲ್ಲಿ ಚಂದ್ರನ ಬಲಾಬಲದಿಂದ ಪತಿ–ಪತ್ನಿಯರ ಆರೋಗ್ಯ ಹೇಳಲ್ಪಡುತ್ತದೆ. ಗೋಚರಿಯಿಂದ ರಾಹು, ಗುರು, ಮಂಗಳ, ಶನಿ ಇವರು ರವಿ-ಚಂದ್ರ ರೊಂದಿಗೆ ಯೋಗ ಮಾಡುತ್ತಿದ್ದಾಗ ಪ್ರಕೃತಿಯ ಮೇಲೆ ಪರಿಣಾಮವಾಗುತ್ತದೆ.

(೧೭) ಚಂದ್ರ-ಶುಕ್ರರ ಯುತಿಯೋಗವು ಲಗ್ನ, ಪಂಚಮ, ಸಪ್ತಮ, ಅಷ್ಟಮ, ವ್ಯಯ ಈ ಯಾವುದೇ ೫ ಸ್ಥಾನದಲ್ಲಿದ್ದ ಜಾತಕನಿಗೆ ವಿವಾಹದ ಪೂರ್ವದಲ್ಲಿಯೇ ವಧೂವರರೆಂದು ನಿಶ್ಚಯವಾಗಿರುತ್ತದೆ ಅಥವಾ ಪ್ರೇಮ ವಿವಾಹವಾಗುತ್ತದೆ.

(೧೮) ಚಂದ್ರ-ಮಂಗಳರ ಯುತಿಯೋಗವು ಲಗ್ನ, ಪಂಚಮ, ಸಪ್ತಮ ಅಷ್ಟಮ, ವ್ಯಯದಲ್ಲಿದ್ದ ಜಾತಕನಿಗೆ ವಿವಾಹ ಪೂರ್ವದಲ್ಲಿಯೇ ವಧೂವರ ರೆಂದು ನಿಶ್ಚಯವಾಗುತ್ತದೆ. ಅಥವಾ ಪ್ರೇಮ ವಿವಾಹ ಆಗುತ್ತದೆ.

(೧೯) ಶುಕ್ರ-ಮಂಗಳರ ಯುತಿಯೋಗವು ಲಗ್ನ, ಪಂಚಮ, ಸಪ್ತಮ, ಅಷ್ಟಮ, ವ್ಯಯ ಈ ಯಾವುದೇ ೫ ಸ್ಥಾನಗಳಲ್ಲಿದ್ದ ಜಾತಕನಿಗೆ ವಿವಾಹದ ಪೂರ್ವದಲ್ಲಿಯೇ ವಧೂವರರೆಂದು ನಿಶ್ಚಯಿಸಿರುತ್ತದೆ. ಅಥವಾ ಪ್ರೇಮ ವಿವಾಹ ಆಗುತ್ತದೆ.

(೨೦) ಚಂದ್ರ-ಶನಿಯರ ಯುತಿ ಸಹ ಮೇಲಿನ ನಿಯಮದಂತಿರುತ್ತದೆ. ಸಪ್ತಮೇಶನು ಸಪ್ತಮದಲ್ಲಿ ಅಥವಾ ತನುಸ್ಥಾನದಲ್ಲಿ ಇದ್ದ ಜಾತಕನಿಗೆ ಸ್ತ್ರೀಸೌಖ್ಯ ಲಭಿಸುವುದಲ್ಲದೇ ಸ್ತ್ರೀಲೋಲುಪನು, ನಿಷ್ಠುರಿಯೂ; ಧೈರ್ಯ ವಂತನು-ಆದರೆ ಹೃದಯದಲ್ಲಿ ಯಾವುದನ್ನೂ ಗುಪ್ತ ಇರಿಸಲಾರದ ಸ್ವಭಾವ ವುಳ್ಳವನಾಗಿರುತ್ತಾನೆ.

ಸಪ್ತಮೇಶನು ಷಷ್ಠದಲ್ಲಿ ಅಥವಾ ಅಷ್ಟಮದಲ್ಲಿ ಇದ್ದರೆ, ಜಾತಕನ ಹೆಂಡತಿಯು ಸಿಡುಕು ಸ್ವಭಾವದವಳಿರುತ್ತಾಳೆ ಆದರಂತೆಯೇ ಅವಿ-ಚಾರಿಯೂ ಸ್ವತಂತ್ರ ಮನೋವೃತ್ತಿಯವಳೂ ಇರುತ್ತಾಳೆ. ಒಟ್ಟಿನ ಮೇಲೆ ಸ್ತ್ರೀಸೌಖ್ಯವು ಕಡಿಮೆ.

ಸಪ್ತಮೇಶನು ನವಮಸ್ಥಾನದಲ್ಲಿ ಅಥವಾ ದ್ವಿತೀಯ ಸ್ಥಾನದಲ್ಲಿ ಇದ್ದರೆ ಜಾತಕನು ಅನೇಕ ಪ್ರಕಾರದ ಸ್ತ್ರೀಯರನ್ನು ಭೋಗಿಸುವನು. ಕಲುಷಿತ ಮನೋವೃತ್ತಿಯುಳ್ಳವನಾಗಿರುತ್ತಾನೆ.

ಸಪ್ತಮೇಶನು ದಶಮದಲ್ಲಿ ಅಥವಾ ಚತುರ್ಥದಲ್ಲಿ ಇದ್ದರೆ. ಜಾತಕನ ಸ್ತ್ರೀಯು ಪತಿವ್ರತೆ ಇರುತ್ತಾಳೆ. ಜಾತಕನು ಕೂಡ ಧನಸಂಪನ್ನನೂ ಧರ್ಮ ಭೀರುವೂ ಇರುತ್ತಾನೆ. ಆದರೆ ಅವನು ವಾತರೋಗದಿಂದ ಬಳಲುತ್ತಾನೆ.

ಸಪ್ತಮೇಶನು ತೃತೀಯ ಇಲ್ಲವೆ ಏಕಾದಶದಲ್ಲಿದ್ದರೆ. ಪುತ್ರಸಂತತಿಯು ನಷ್ಟ-ಮೃತವಾಗುವದು. ಹೆಣ್ಣು ಸಂತತಿಯು ಬದುಕಬಹುದು. ಆಮೇಲೆ ಪುತ್ರಸಂತತಿಯು ಆಗುವದು.

ಸಪ್ತಮೇಶನು ದ್ವಾದಶದಲ್ಲಿದ್ದರೆ. ಜಾತಕನು ಅತ್ಯಂತ ಕೃಪಣನಾಗಿ ವನು; ಹಾಗೂ ಸಂಕಟಗ್ರಸ್ತನಿರುವನು. ಹೇಗಾದರೂ ಹೊಟ್ಟೆಯನ್ನು

ಹೊರದುಕೊಳ್ಳುವ ವ್ಯಾಪಾರಿಯಾಗುವನು. ಜಾರ ಕನ್ಯೆಯು ಇವನ ಹೆಂಡತಿಯಾಗುವಳು.

ಸಪ್ತಮಾಧಿಪತಿಯು ಪಂಚಮದಲ್ಲಿದ್ದರೆ, ಜಾತಕನು ಸರ್ವಗುಣ ಯುಕ್ತ, ಮಾನವಂತ, ಸರ್ವಪ್ರಕಾರದ ಸುಖವುಳ್ಳವನಾಗುತ್ತಾನೆ. ಇವ ನಿಗೆ ಯಾವ ತರಹದ ಅಡಚಣೆಗಳಿರುವುದಿಲ್ಲ.

ಲಗ್ನಾಧಿಪತಿಯು ಲಗ್ನದಲ್ಲಿ ಇದ್ದರೆ, ಜಾತಕನು ಸ್ವಪರಾಕ್ರಮಿಯೂ ಚಂಚಲ ಸ್ವಭಾವಿಯೂ ಆಗುತ್ತಾನೆ. ಮತ್ತು ದ್ವಿಭಾರ್ಯಾಯುಕ್ತನಾಗಲಿ, ಪರಸ್ತ್ರೀಗಾಮಿಯಾಗಲಿ ಆಗುತ್ತಾನೆ. ಅದರಂತೆಯೇ ಲಗ್ನಾಧಿಪತಿಯು ತೃತೀಯದಲ್ಲಿದ್ದರೆ, ದ್ವಿಭಾರ್ಯಾಯೋಗವು ಸಂಭವಿಸುವದು. ಲಗ್ನಾಧಿ ಪತಿಯು ಸಪ್ತಮದಲ್ಲಿದ್ದರೆ, ಜಾತಕನ ಹೆಂಡತಿಯು (ಸ್ತ್ರೀಯು) ಬದು ಕುವುದು ವಿರಳ. (ಇಲ್ಲಿ ದುಷ್ಟಗ್ರಹಗಳ ದೃಷ್ಟಿಯನ್ನು ಕೂಡ ಲಕ್ಷ್ಯದಲ್ಲಿ ತರ ಬೇಕು.) ಲಗ್ನಾಧಿಪನು ನವಮದಲ್ಲಿದ್ದರೆ, ಪುತ್ರ ಸಂತತಿಯೂ ಸುಂದರ ಸ್ತ್ರೀ ಹಾಗೂ ಸಂಪತ್ತಿಗಳೂ ದೊರೆಯುವವು.

ಧನಾಧಿಪತಿಯು (ದ್ವಿತೀಯಾಧಿಪನು) ಧನಸ್ಥಾನದಲ್ಲಿದ್ದರೆ, ಜಾತಕನಿಗೆ ೨-೩ ಸ್ತ್ರೀಯರ ಸೌಖ್ಯ ದೊರೆಯುವುದು. ಆದರೆ ಪುತ್ರಸಂತತಿಯು ಅಭಾವ ವಿರುವುದು. ಧನೇಶನು ತೃತೀಯದಲ್ಲಿದ್ದರೆ, ಜಾತಕನು ದೈವಭಕ್ತನಿರುತ್ತಾನೆ. ಆದರೂ ಪರದಾರಾಗ್ರಾಮಿಯಿರುವನು. ಧನೇಶನು ಸಪ್ತಮದಲ್ಲಿದ್ದರೆ, ಜಾತಕನು ಪರಸ್ತ್ರೀಯರೊಡನೆ ಸಂಬಂಧವುಳ್ಳವನು ಮತ್ತು ಅವನ ಸ್ತ್ರೀಯು ಕೂಡ ವ್ಯಭಿಚಾರಿಣಿ ಇರುತ್ತಾಳೆ. (ಉಳಿದ ಸಂಗತಿಗಳನ್ನು ಕೂಡ ಲಕ್ಷ್ಯದಲ್ಲಿ ತರಬೇಕು). ಧನೇಶನು ದಶಮದಲ್ಲಿದ್ದರೆ ಸ್ತ್ರೀಸುಖವು ಉತ್ತಮವು; ಆದರೆ ಸಂತತಿಯು ಅಭಾವವಿರುವುದು.

ತೃತೀಯಾಧಿಪನು ವ್ಯಯದಲ್ಲಿ ಅಥವಾ ಭಾಗ್ಯದಲ್ಲಿ ಇದ್ದರೆ, ಸ್ತ್ರೀ ಸಂಬಂಧದಲ್ಲಿ ಅಥವಾ ಸ್ತ್ರೀಯರಿಂದ ಲಾಭವಾಗುತ್ತದೆ.

ಚತುರ್ಥೇಶನು ಚತುರ್ಥದಲ್ಲಿದ್ದರೆ, ಸ್ತ್ರೀಪ್ರಿಯನಾಗುತ್ತಾನೆ. ಚತು ರ್ಥೇಶನು ದಶಮದಲ್ಲಿದ್ದರೆ, ತಾಯಿಯ ಸೌಖ್ಯವು ಚೆನ್ನಾಗಿರುತ್ತದೆ.

ಷಷ್ಠಾಧಿಪನು ಅಷ್ಟಮದಲ್ಲಿ ಅಥವಾ ವ್ಯಯದಲ್ಲಿ ಇದ್ದರೆ, ದುರ್ವಿ- ಚಾರಿಯೂ ಪರಸ್ತ್ರೀ ಅಭಿಲಾಷಿಯೂ ಆಗುತ್ತಾನೆ.

ಅಷ್ಟಮೇಶನು ಅಷ್ಟಮದಲ್ಲಿದ್ದರೆ, ಜಾತಕನು ಸ್ತ್ರೀಲೋಲುಪನಿರುವನು. (ಉಳಿದ ಸಂಗತಿಗಳನ್ನು ಕೂಡ ಲಕ್ಷ್ಯದಲ್ಲಿ ತರಬೇಕು). ಅಷ್ಟಮೇಶನು ನವಮ ದಲ್ಲಿದ್ದರೆ ಜಾತಕನಿಗೆ ಸಂತಾನವು ತೀರ ಕಡಿಮೆ. ಅಷ್ಟಮೇಶನು ಸಪ್ತಮದಲ್ಲಿ ಅಥವಾ ತನುಸ್ಥಾನದಲ್ಲಿದ್ದರೆ ಆ ಮನುಷ್ಯನಿಗೆ ಎರಡು ವಿವಾಹಗಳು ಜರುಗು ವವು.

## ಬಂಧು-ಬಳಗದಲ್ಲಿ ವಿವಾಹ

(೧) ಜನ್ಮಕುಂಡಲಿಯಲ್ಲಿ ಚಂದ್ರ-ಶುಕ್ರರು ಬಲವಂತರಿದ್ದು, ಚತುರ್ಥ ಹಾಗೂ ಸಪ್ತಮ ಸ್ಥಾನಾಧಿಪತಿಗಳೊಂದಿಗೆ ಶುಭಸಂಬಂಧವಿದ್ದರೆ, ಬಂಧು- ಬಳಗದಲ್ಲಿ ವಿವಾಹವಾಗುತ್ತದೆ.

(೨) ಸ್ವಕ್ಷೇತ್ರೀ ಚಂದ್ರನು ಚತುರ್ಥದಲ್ಲಿ ಹಾಗೂ ಸ್ವಕ್ಷೇತ್ರಿ ಶುಕ್ರನು ಸಪ್ತಮದಲ್ಲಿದ್ದರೆ ಬಂಧು-ಬಳಗದಲ್ಲಿ ಲಗ್ನವಾಗುತ್ತದೆ. (ಪಾಪಗ್ರಹ ದೃಷ್ಟಿರಹಿತ ಸಪ್ತಮಸ್ಥಾನ).

(೩) ಷಷ್ಠಸ್ಥಾನದಲ್ಲಿ ಉಚ್ಚ ಅಥವಾ ಸ್ವಕ್ಷೇತ್ರೀ ಶುಕ್ರ-ಚಂದ್ರರಿದ್ದರೆ ಬಳಗದಲ್ಲಿ ವಿವಾಹವಾಗುತ್ತದೆ

(೪) ಉಚ್ಚಚಂದ್ರನು ಷಷ್ಠದಲ್ಲಿದ್ದು ಸ್ವಕ್ಷೇತ್ರಿ ಅಥವಾ ಉಚ್ಚ ಶುಕ್ರನು ಸಪ್ತಮದಲ್ಲಿದ್ದರೆ, ಬಳಗದಲ್ಲಿ ವಿವಾಹವಾಗುತ್ತದೆ.

(೫) ಲಗ್ನಾಧಿಪತಿಯಾದ ಚಂದ್ರನು ಲಗ್ನದಲ್ಲಿದ್ದು, ಉಚ್ಚದಲ್ಲಿ ಅಥವಾ ಸ್ವಕ್ಷೇತ್ರೀ ಶುಕ್ರನು ಸಪ್ತಮ ಇಲ್ಲವೆ ಲಗ್ನದಲ್ಲಿದ್ದು, ಪಾಪದೃಷ್ಟಿ ರಹಿತ ಸಪ್ತಮಸ್ಥಾನವಿದ್ದರೆ, ಬಳಗದಲ್ಲಿ ವಿವಾಹವಾಗುತ್ತದೆ.

(೬) ಸ್ವಕ್ಷೇತ್ರೀ ಚಂದ್ರನು ಷಷ್ಠದಲ್ಲಿದ್ದು, ಶುಕ್ರನು ಸ್ವಕ್ಷೇತ್ರದಲ್ಲಿದ್ದರೆ ಬಳಗದಲ್ಲಿ ವಿವಾಹ ಜರುತ್ತದೆ.

(೭) ಭಾಗ್ಯಾಧಿಪ ಹಾಗೂ ಸಪ್ತಮಾಧಿಪರೊಂದಿಗೆ ಗುರುವಿನ ಅಥವಾ ಶುಕ್ರನ ಸುಬಂಧವಿದ್ದರೆ, ಬಳಗದಲ್ಲಿ ವಿವಾಹವಾಗುತ್ತದೆ.

(೮) ಲಗ್ನಾಧಿಪತಿಯಾದ ಚಂದ್ರನು ಲಗ್ನದಲ್ಲಿದ್ದು, ಹಾಗೂ ಭಾಗ್ಯ ದಲ್ಲಿ ಶುಕ್ರನಿದ್ದು ಪಾಪಗ್ರಹದೃಷ್ಟಿರಹಿತ ಸಪ್ತಮಸ್ಥಾನವಾದರೆ ಬಳಗದಲ್ಲಿ ವಿವಾಹವಾಗುತ್ತದೆ.

ಚಂದ್ರ, ಗುರು, ಶುಕ್ರ ಇವರು ರೋಹಿಣಿ, ಪುನರ್ವಸು, ಪುಷ್ಯ ಪೂರ್ವಾ, ಹಸ್ತಾ, ಸ್ವಾತಿ, ಅನುರಾಧಾ, ಪೂರ್ವಾಷಾಢಾ, ಶ್ರವಣಾ, ರೇವತೀ ಈ ಶುಭನಕ್ಷತ್ರಗಳಿಂದ ಸಪ್ತಮದಲ್ಲಿದ್ದರೆ, ಪತಿ ಅಥವಾ ಪತ್ನಿಯರು ಸುಂದರ, ತೇಜಸ್ವಿ, ಸದ್ಗುಣಿ, ಪತಿವ್ರತೆ ಇರುವರು. ಹೀಗೆಯೇ ದ್ವಿತೀಯ—ಪಂಚಮ-ನವಮದಲ್ಲಿದ್ದರೂ ಇದರಂತೆಯೇ ಫಲ ಸಿಗುತ್ತದೆ.

ಮೇಲೆ ಹೇಳಿದ ಗ್ರಹಗಳು ಸಪ್ತಮದಲ್ಲಿದ್ದು ಕೃತ್ತಿಕಾ, ಮಘಾ, ಆಶ್ಲೇಷಾ, ವಿಶಾಖಾ, ಜ್ಯೇಷ್ಠಾ, ಮೂಲಾ, ಧನಿಷ್ಠಾ ಈ ಕ್ರೂರ ನಕ್ಷತ್ರಗಳಲ್ಲಿದ್ದರೆ, ಪತಿ-ಪತ್ನಿಯರಲ್ಲಿ ಪ್ರೇಮ ಅಷ್ಟೊಂದು ಇರುವದಿಲ್ಲ. ಆದರೆ ಇವೇ ನಕ್ಷತ್ರದಲ್ಲಿ ಪಾಪಗ್ರಹಗಳಿದ್ದು ಸಪ್ತಮದಲ್ಲಿದ್ದರೆ, ಪತಿ-ಪತ್ನಿಯರಲ್ಲಿ ಮೇಲಿಂದ ಮೇಲೆ ಜಗಳ ಉದ್ಭವಿಸುತ್ತದೆ.

## ಉತ್ತಮ ಪತ್ರಿಕೆ

(೧) ವಧೂವರರದು ಒಂದೇ ರಾಶಿ ಹಾಗೂ ಒಂದೇ ಲಗ್ನವಾದರೆ ಉತ್ತಮವು.

(೨) ಒಬ್ಬರ ರಾಶಿ ಲಗ್ನವಿದ್ದು ಇನ್ನೊಬ್ಬರದು ಸಪ್ತಮವಾದರೆ ಉತ್ತಮವು.

(೩) ಒಬ್ಬರ ಚಂದ್ರನು ಇನ್ನೊಬ್ಬರ ಸಪ್ತಮದಲ್ಲಿದ್ದರೆ ಉತ್ತಮವು.

(೪) ಒಬ್ಬರ ಶುಕ್ರನು ಲಗ್ನದಲ್ಲಿದ್ದು ಇನ್ನೊಬ್ಬರ ಶುಕ್ರನು ಸಪ್ತಮದಲ್ಲಿದ್ದರೆ ಉತ್ತಮವು.

(೫) ಒಬ್ಬರ ಲಗ್ನಾಧಿಪತಿಯು ಇನ್ನೊಬ್ಬರ ಸಪ್ತದಲ್ಲಿ ಅಥವಾ ಒಬ್ಬರ ಸಪ್ತಮಾಧಿಪತಿಯು ಇನ್ನೊಬ್ಬರ ಲಗ್ನದಲ್ಲಿದ್ದರೆ ಉತ್ತಮವು.

(೬) ಇಬ್ಬರಿಗೂ ಲಗ್ನೇಶ ಅಥವಾ ಸಪ್ತಮೇಶ ಒಂದೇ ರಾಶಿಯಲ್ಲಿ ಇದ್ದರೆ ಅಥವಾ ಎದುರುಬದುರು ಇದ್ದರೆ ಉತ್ತಮವು.

(೭) ಒಬ್ಬರ ಶುಕ್ರನು ಒಂದೇ ರಾಶಿಯಲ್ಲಿದ್ದರೆ ಉತ್ತಮವು.

(೮) ೩೬ ಗುಣ ಕೂಡಿಬಂದ ಪತ್ರಿಕೆಯಿದ್ದರೆ ಉತ್ತಮವು.

(೯) ಉಭಯತರರೂ ಒಂದೇ ರಾಶಿ ಇದ್ದರೆ, ಉತ್ತಮವು.

(೧೦) ಒಬ್ಬರ ಗುರುವು ಇನ್ನೊಬ್ಬರ ತ್ರಿಕೋಣದಲ್ಲಿ ಅಥವಾ ತೃತೀಯ ಏಕಾದಶ ಸ್ಥಾನದಲ್ಲಿದ್ದರೆ ಉತ್ತಮವು.

ಈ ಪ್ರಕಾರ ಗ್ರಹಗಳಿದ್ದರೆ ದಾಂಪತ್ಯ ಜೀವನ ಚೆನ್ನಾಗಿ ಸಾಗುವುದು.

## ಅಶುಭಯೋಗ

ವಧೂವರರಲ್ಲಿ ಒಬ್ಬರ ಕುಂಡಲಿಯಲ್ಲಿ ಮಾತ್ರ ಲಗ್ನ ಅಥವಾ ಸಪ್ತಮ ದಲ್ಲಿ ರವಿ, ಕುಜ, ಶನಿ, ರಾಹುಗಳಿದ್ದು ಇನ್ನೊಬ್ಬರ ಕುಂಡಲಿಯಲ್ಲಿ ಇರ ದಿದ್ದರೆ ಅಶುಭದಾಯಕವು.

## ದ್ವಿಭಾರ್ಯಾಯೋಗ

ಚಂದ್ರನು ಕರ್ಕ, ಮೀನ, ಮಿಥುನ, ಧನು ಈ ರಾಶಿಗಳಲ್ಲಿದ್ದು, ಅನೇಕ ಗ್ರಹಗಳಿಂದ ದೃಷ್ಟಿತನಾಗಿದ್ದರೆ, ವಿಶೇಷವಾಗಿ ಚಂದ್ರನನ್ನು ದೃಷ್ಟಿ ಸಿದ ಗ್ರಹವು ಸಪ್ತಮದಲ್ಲಿದ್ದರೆ, ಎರಡನೆಯ ಮದುವೆಯ ಯೋಗವು ಬರುವುದು.

೨-೩ ಗ್ರಹಗಳಿಂದ ದೃಷ್ಟಿಸಲ್ಪಟ್ಟ ಚಂದ್ರನು ದ್ವಿಸ್ವಭಾವ ರಾಶಿಗಳಲ್ಲಿ ದ್ದರೆ, ಅಥವಾ ಆ ಗ್ರಹಗಳೇ ದ್ವಿಸ್ವಭಾವ ರಾಶಿಗಳಲ್ಲಿದ್ದರೆ ಅನೇಕ ಪತ್ನಿತ್ವ ವನ್ನು ತೋರಿಸುತ್ತದೆ.

ಚಂದ್ರನು ಯಾರ ದೃಷ್ಟಿಗೂ ಒಳಗಾಗದೆ ಇದ್ದು, ೨-೩ ಗ್ರಹಗಳು ಸಪ್ತಮದಲ್ಲಿದ್ದರೆ, ಸಪ್ತಮಾಧಿಪತಿಯು ದ್ವಿಸ್ವಭಾವ ರಾಶಿಯಲ್ಲಿದ್ದರೆ ದ್ವಿಭಾರ್ಯಾಯೋಗವು ಬರುತ್ತದೆ.

ಲಗ್ನಾಧಿಪತಿಯು ಉಳಿದ ಗ್ರಹಗಳೊಂದಿಗೆ, ದ್ವಿಸ್ವಭಾವ ರಾಶಿಯಲ್ಲಿ ಸಪ್ತಮದಲ್ಲಿದ್ದರೆ, ಬಹು ಪತ್ನಿತ್ವವು ಸ್ಪಷ್ಟವಾಗಿ ತೋರಿಸುತ್ತದೆ.

ಲಗ್ನಾಧಿಪತಿಯು ಸಪ್ತಮಾಧಿಪತಿಯೊಂದಿಗೆ ಯುತನಾಗಿ ದ್ವಿಸ್ವಭಾವ ರಾಶಿಯಲ್ಲಿದ್ದರೆ ಬಹುಪತ್ನಿತ್ವವು ಕಂಡು ಬರುತ್ತದೆ.

ಮೇಷಲಗ್ನವಿದ್ದು, ಲಗ್ನದಲ್ಲಿ ಚಂದ್ರ, ಸಪ್ತಮದಲ್ಲಿ ಶುಕ್ರನಿದ್ದರೆ ಅಥವಾ ತುಲಾ ಲಗ್ನವಿದ್ದು, ಲಗ್ನದಲ್ಲಿ ಚಂದ್ರ,ಸಪ್ತಮದಲ್ಲಿ ಶುಕ್ರನಿದ್ದರೆ ದ್ವಿಭಾರ್ಯಾಯೋಗವು ಬರುತ್ತದೆ.

ಮೇಷ, ವೃಶ್ಚಿಕ, ಕರ್ಕ, ಸಿಂಹ, ಮಕರ ಈ ರಾಶಿಯು ಸಪ್ತಮ ದಲ್ಲಿ ಮಂಗಳನಿದ್ದು ಅಲ್ಲಿಯೇ ಚಂದ್ರನಿದ್ದರೆ, ದ್ವಿಭಾರ್ಯಾಯೋಗವಾಗು ವುದು.

ಸಪ್ತಮೇಶ ನೀಚ, ಅಸ್ತಂಗತ ಪಾಪಗ್ರಹಯುಕ್ತ ಅಥವಾ ನಿರ್ಬಲನಿದ್ದರೆ ದ್ವಿಭಾರ್ಯಾಯೋಗವಾಗುವದು.

ಸಪ್ತಮದಲ್ಲಿ ಹಾಗೂ ದ್ವಿತೀಯದಲ್ಲಿ ರಾಕ್ಷಸ ಗಣದ ನಕ್ಷತ್ರವೂ ಮತ್ತೂ ಪಾಪಗ್ರಹಗಳಿದ್ದರೆ ಈ ಯೋಗವು ಬರುವುದು.

ಮೇಷ, ವೃಶ್ಚಿಕ, ಮಕರರಾಶಿಯ ಮಂಗಳನು ಕ್ರೂರನಕ್ಷತ್ರಗಳಲ್ಲಿದ್ದು ಸಪ್ತಮ ಅಥವಾ ಲಗ್ನದಲ್ಲಿದ್ದು, ಗುರು-ಶುಕ್ರರ ದೃಷ್ಟಿ ರಹಿತ ಸಪ್ತಮಸ್ಥಾನವಿದ್ದರೆ, ದ್ವಿಭಾರ್ಯಾಯೋಗವಾಗುವದು.

## ವಿಧುರ ಅಥವಾ ವೈಧವ್ಯ ಯೋಗಗಳು

(೧) ಶುಕ್ರನು ಅಸ್ತಂಗತನಿದ್ದು, ಸಪ್ತಮದಲ್ಲಿದ್ದರೆ ಈ ಯೋಗವು ಆಗುವುದು.

(೨) ಶುಕ್ರನು ರಾಕ್ಷಸಗಣದವನಿದ್ದು ಪಾಪಗ್ರಹಗಳೊಂದಿಗೆ ಸಪ್ತಮದಲ್ಲಿದ್ದರೆ ಈ ಯೋಗವು ಬರುವುದು.

(೩) ಶುಕ್ರನ ಚತುರ್ಥದಲ್ಲಿ ಪಾಪಗ್ರಹವಿದ್ದು, ಶುಕ್ರನೊಂದಿಗೆ ಕೇಂದ್ರಯೋಗ ಮಾಡುತ್ತಿದ್ದರೆ ಈ ಯೋಗವು ಆಗುವುದು.

(೪) ಷಷ್ಠ, ಅಷ್ಟಮ, ದ್ವಾದಶ, ಸಪ್ತಮಗಳಲ್ಲಿ ಪಾಪಗ್ರಹಗಳಿದ್ದರೆ ಈ ಯೋಗವು ಬರುವುದು.

(೫) ಚಂದ್ರ ಅಥವಾ ಶುಕ್ರನೊಂದಿಗೆ ಬಲಾಢ್ಯ ಪಾಪಗ್ರಹ ಸಮ-ಸಪ್ತಕಯೋಗ ಮಾಡುತ್ತಿದ್ದರೆ—

(೬) ಪಾಪಗ್ರಹವಾದ ಸಪ್ತಮೇಶನು ಅಷ್ಟಮದಲ್ಲಿ ಅಷ್ಟಮೇಶನು ಸಪ್ತಮದಲ್ಲಿದ್ದರೆ ಈ ಯೋಗವಾಗುವದು.

(೭) ಲಗ್ನದಲ್ಲಿ ರಾಹು ಇದ್ದು, ಸಪ್ತಮದಲ್ಲಿ ಅಥವಾ ಅಷ್ಟಮದಲ್ಲಿ ಕುಜನಿದ್ದರೆ ಈ ಯೋಗವು ಬರುವುದು.

(೮) ಸಪ್ತಮೇಶನು ನಿರ್ಬಲನಿದ್ದು, ಅಷ್ಟಮದಲ್ಲಿ ಎರಡು ಅಥವಾ ಹೆಚ್ಚು ಅಶುಭಗ್ರಹಗಳಿದ್ದರೆ ಈ ಯೋಗವು ಆಗುವುದು.

(೯) ದ್ವಾದಶ ಇಲ್ಲವೆ ಅಷ್ಟಮದಲ್ಲಿ ಕುಜ ರಾಹು-ಗ್ರಹಗಳು ಮೇಷ, ವೃಶ್ಚಿಕಗಳಲ್ಲಿದ್ದರೆ ಈ ಯೋಗವುಂಟಾಗುವದು.

(೧೦) ಸಪ್ತಮೇಶನ ಮೇಲೆ ಅಥವಾ ಸಪ್ತಮಸ್ಥಾನದ ಮೇಲೆ ಅನೇಕ ಪಾಪಗ್ರಹಗಳ ಅಶುಭದೃಷ್ಟಿ ಇದ್ದರೆ, ಈ ತರಹದ ಯೋಗ ಉಂಟಾಗುವದು.

(೧೧) ಅನೇಕ ಪಾಪಗ್ರಹಗಳು ಸಪ್ತಮದಲ್ಲಿದ್ದರೆ, ಈ ಯೋಗವಾಗುವದು.

(೧೨) ಶನಿ–ಮಂಗಳ, ರವಿ–ಶನಿ ಇವರ-ಯುತಿಯು ಸಪ್ತಮದಲ್ಲಿದ್ದರೆ ಈ ತರಹದ ಯೋಗವುಂಟಾಗುವದು.

(೧೩) ಬಲಾಢ್ಯ ಮಂಗಳನು ಲಗ್ನ ಅಥವಾ ಸಪ್ತಮದಲ್ಲಿದ್ದು : ಗುರು. ಶುಕ್ರರ ದೃಷ್ಟಿರಹಿತನಾಗಿದ್ದರೆ ಈ ಯೋಗವಾಗುವದು.

(೧೪) ಸಪ್ತಮೇಶನು ನೀಚ, ಅಸ್ತಂಗತ, ಪಾಪಗ್ರಹದೂಷಿತ ಅಥವಾ ಪಾಪಗ್ರಹದ ಮಧ್ಯ ಹೀಗೆ ಯೋಗವಿದ್ದರೆ—

(೧೫) ದ್ವಾದಶ ಇಲ್ಲವೆ ಅಷ್ಟಮದಲ್ಲಿ ಮೇಷ ಅಥವಾ ವೃಶ್ಚಿಕ ರಾಶಿಯು ರಾಹು-ಶನಿ-ಮಂಗಳರು ಇದ್ದರೆ—

(೧೬) ಶನಿ-ಮಂಗಳರ ಅಥವಾ ಶನಿ–ರವಿಗಳ ಸಮಸಪ್ತಕವು ಲಗ್ನ, ಸಪ್ತಮ, ದ್ವಿತೀಯ, ಅಷ್ಟಮಗಳಿದ್ದರೆ, ಪತಿ ಅಥವಾ ಪತ್ನಿಗೆ ಅನಿಷ್ಟವು ಆಗುತ್ತದೆ.

(೧೭) ಬಲಾಢ್ಯ ಕುಜನು ಚತುರ್ಥದಲ್ಲಿ ಹಾಗೂ ಬಲಾಢ್ಯ ಶನಿಯು ದಶಮದಲ್ಲಿ ಇದ್ದು, ಗುರುವಿನ ದೃಷ್ಟಿ ಸಪ್ತಮದಲ್ಲಿರದೆ ಇರುವದೂ ಸಪ್ತಮೇಶನು ನಿರ್ಬಲಿಯಾಗಿರುವದೂ ಪತಿ ಅಥವಾ ಪತ್ನಿಗೆ ಅನಿಷ್ಟದಾಯಕವಾಗುತ್ತದೆ.

(೧೮) ರವಿ–ಮಂಗಳ, ಶನಿ-ಮಂಗಳ, ರವಿ–ಶನಿ, ಹರ್ಶಲ್–ಮಂಗಳ, ಹರ್ಶಲ್–ಶನಿ ಇವರ ಯುತಿ ಸಪ್ತಮದಲ್ಲಿದ್ದರೆ, ಪತಿ ಅಥವಾ ಪತ್ನಿಯು ಸುಖ ಸಿಗಲಾರದು. (ಗುರುವಿನ ದೃಷ್ಟಿರಹಿತ ಸಪ್ತಮಸ್ಥಾನ).

## ಗುರು ಚಂದ್ರರ ಬಲಾಬಲ

ಯಾವುದೇ ಮಂಗಳ ಕಾರ್ಯಕ್ಕೆ ಗುರು ಚಂದ್ರರ ಬಲವಿರಬೇಕು. ವಿವಾಹಕ್ಕಾದರೂ ಗುರು–ಚಂದ್ರರ ಬಲವು ಅವಶ್ಯವು.

"ಸ್ತ್ರೀಣಾಂ ಗುರುಬಲಂ ಶ್ರೇಷ್ಠಂ ಪುರುಷಾಣಾಂ ರವೇರ್ಬಲಮ್ ।
ತಯೋಶ್ಚಂದ್ರ ಬಲಂ ಶ್ರೇಷ್ಠಂ ಇತಿ ಗರ್ಗೇಣ ಭಾಷಿತಮ್"

ಇದರ ತಾತ್ಪರ್ಯವೇನೆಂದರೆ ; ಸ್ತ್ರೀಯರಿಗೆ ಗುರುವಿನ ಬಲವೂ, ಪುರುಷರಿಗೆ ರವಿಯ ಬಲವೂ ಶುಭದಾಯಕವು. ಇಬ್ಬರಿಗೂ ಚಂದ್ರನ ಬಲವೂ ಶ್ರೇಷ್ಠವೆಂದು ಗರ್ಗಮುನಿಗಳು ಹೇಳಿದ್ದಾರೆ.

## ಗುರುಬಲ

(i) ಜನ್ಮರಾಶಿಯಿಂದ ಗೋಚರೀ ಗುರುವು ೨-೫-೭-೯-೧೧ನೆಯವನಿದ್ದರೆ ಉತ್ತಮನು (ಶುಭದಾಯಕನು).

(ii) ಜನ್ಮರಾಶಿಯಿಂದ ಗೋಚರೀಗುರುವು ೧-೩-೬-೧೦ನೆಯವನು ಇದ್ದರೆ ಮಧ್ಯಮನು. ಶಾಂತಿ—ಪೂಜಾದಿಗಳಿಂದ ಶುಭನಾಗುತ್ತಾನೆ.

(iii) ಜನ್ಮರಾಶಿಯಿಂದ ಗೋಚರೀಗುರುವು ೪-೮-೧೨ನೆಯವನು ಇದ್ದರೆ ಅಶುಭನು. ಆದರೆ ಗುರುವು ಕರ್ಕ, ಧನು, ಮೀನ ಈ ರಾಶಿಗಳಲ್ಲಿದ್ದರೆ, ೪-೮-೧೨ನೆಯವನಿದ್ದರೂ, ಅಶುಭಫಲವನ್ನು ಕೊಡಲಾರನು.

## ರವಿಬಲ

ಜನ್ಮರಾಶಿಯಿಂದ ಗೋಚರೀ ರವಿಯು ೩-೬-೧೦-೧೧ನೆಯವನಿದ್ದರೆ ಶುಭಫಲದಾಯಕನು.

ಇತರ ಸ್ಥಾನಗಳಲ್ಲಿದ್ದರೆ ಶಾಂತ–ಪೂಜಾದಿಗಳಿಂದ ಶುಭನಾಗುವನು. ಗೋಚರಿಯಿಂದ ರವಿಯೂ ಅಶುಭನಿದ್ದರೂ, ಅವನು ಮೇಷ, ಸಿಂಹರಾಶಿಗಳಲ್ಲಿದ್ದರೆ, ಅನಿಷ್ಟದಾಯಕನಾಗಲಾರನು.

## ಚಂದ್ರಬಲ

(i) ಜನ್ಮರಾಶಿಯಿಂದ ಗೋಚರೀ ಚಂದ್ರನು ೨-೫-೭-೯-೧೧ನೆಯವನಿದ್ದರೆ ಉತ್ತಮನು, ಅಂದರೆ ಶುಭದಾಯಕನು.

(ii) ಜನ್ಮರಾಶಿಯಿಂದ ಗೋಚರೀ ಚಂದ್ರನು ೧-೩-೬-೧೦ನೆಯವನಿದ್ದರೆ ಮಧ್ಯಮನು, ಅಂದರೆ ಪೂಜಾ, ಶಾಂತಿ ಮೊದಲಾದ ಕಾರ್ಯಗಳಿಂದ ಶುಭನಾಗುವನು.

(iii) ಜನ್ಮರಾಶಿಯಿಂದ ಗೋಚರೀ ಚಂದ್ರನು ೪-೮-೧೨ನೆಯವನಿದ್ದರೆ ಅನಿಷ್ಟಫಲದಾಯಕನು. ಆದರೆ ಅವನು ವೃಷಭ-ಕರ್ಕ ರಾಶಿಸ್ಥನಾಗಲಿ ಅಥವಾ ಪೌರ್ಣಿಮೆಯ ಚಂದ್ರನಾಗಲಿ ಇದ್ದರೆ (ಗ್ರಹಣ ಕಾಲವನ್ನು ಬಿಟ್ಟು) ಅಶುಭನಾಗಲಾರನು.

———

## ೭. ಸಂತತಿ ಹಾಗೂ ಜ್ಯೋತಿಷ್ಯ

ಸಂತತಿಗಳ ವಿಷಯವನ್ನು ನೋಡುವಾಗ ಪತಿ-ಪತ್ನಿಯರಿಬ್ಬರ ಕುಂಡಲಿಗಳನ್ನು ಪರಿಶೀಲಿಸಬೇಕು. ಅವರಲ್ಲಿಯೂ ವಿಶೇಷವಾಗಿ ಸ್ತ್ರೀಯರ ಕುಂಡಲಿಗಳನ್ನು ನೋಡಬೇಕು. ಪುರುಷನು ಹೀನಬೀಜದವನಿರುವುದಕ್ಕಿಂತ ಹೆಚ್ಚಾಗಿ ಸ್ತ್ರೀ ವಂಧ್ಯೆಯಾಗಿರುವದು ಸಾಧ್ಯವಿದೆ.

ಇತ್ತೀಚೆಗೆ ಸಂತತಿಯ ಬಗ್ಗೆ ಆಸ್ಥೆ ಕಡಿಮೆಯಾಗಿದೆ. ಇದಕ್ಕೆ ಕಾರಣ ಬೆಳೆಯುತ್ತಿರುವ ಜನಸಂಖ್ಯೆ. ಆದರೂ ಯಾವ ದಂಪತಿಯೂ ತನಗೆ ಸಂತಾನ ಬೇಡೆನ್ನುವುದಿಲ್ಲ, ಮದುವೆಯ ಉದ್ದೇಶಗಳಲ್ಲೊಂದಾದ ಸಂತತಿ ಸುಖವು ಮುಖ್ಯವಾದದ್ದು ಇರುತ್ತದೆ. ಮದುವೆಯಾದ ೩-೪ವರುಷಗಳಲ್ಲಿ ಮಕ್ಕಳಾಗದಿದ್ದರೆ, ಸಮಾಜವು ಆ ಸ್ತ್ರೀಗೆ ಬಂಜೆಯೆಂದು ಹೆಸರಿಡುತ್ತದೆ. ಕೆಲವು ಪ್ರಸಂಗಗಳಲ್ಲಿ ಅತ್ತೆಯ ಕಾಟವು ತಡೆಯಲು ಅಸಾಧ್ಯವಾಗುತ್ತದೆ. ಎರಡನೆಯ ಮದುವೆಯ ವಿಚಾರವೂ ನಡೆಯುತ್ತದೆ. ಆ ಹೆಣ್ಣು ಉಪವಾಸ, ವನವಾಸ, ವ್ರತಾದಿಗಳನ್ನು ಕೈಕೊಳ್ಳಬೇಕಾಗುತ್ತದೆ. ಕೆಲವು ಅಪವಾದಗಳನ್ನು ಬಿಟ್ಟರೆ, ಇಂಥ ಸ್ತ್ರೀಯರು ನಿಜವಾಗಿ ಬಂಜೆಯಾಗಿರುವುದಿಲ್ಲ. ಮದುವೆಯಾದ ೧೦-೧೨ ವರುಷಗಳ ತರುವಾಯ ಕೂಡ ಸಂತಾನಯೋಗ ಬಂದು ಮಕ್ಕಳಾದ ಅನೇಕ ಉದಾಹರಣೆಗಳಿವೆ. ಒಂದು ಹಳ್ಳಿಯಲ್ಲಿ ಒಬ್ಬ ಮಹಿಳೆಗೆ ಲಗ್ನವಾದ ಎಂಟು ವರುಷಗಳವರೆಗೆ ಮಕ್ಕಳಾಗಿರಲಿಲ್ಲ. ಅವಳ ಪತಿಗೆ ಇನ್ನೊಂದು ವಿವಾಹವನ್ನು ಮಾಡುವ ಸಿದ್ಧತೆ ಜೋರಾಗಿ ನಡೆದಿತ್ತು. ಅವರು ಈ ವಿಷಯದ ಬಗ್ಗೆ ನನ್ನ ಸಲಹೆ ಕೇಳಿದರು, ಆಗ ನಾನು ಅವಳ ಕುಂಡಲಿಯನ್ನು ಪರಿಶೀಲಿಸಿದೆ. ಮತ್ತು ಒಂದೇ ವರುಷದಲ್ಲಿ ಸಂತಾನ ಯೋಗವಿದ್ದುದನ್ನು ಅರಿತೆ. ಎರಡನೆಯ ಮದುವೆಯನ್ನು ನಾನೇ ತಡೆದೆ, ನನ್ನ ಭವಿಷ್ಯಕ್ಕನುಗುಣವಾಗಿ ಅವಳಿಗೆ ಒಂದು ವರುಷದ ಮೇಲೆ ಗಂಡು ಸಂತಾನ ಪ್ರಾಪ್ತವಾಯಿತು. ಇದೊಂದು ನಾನು ಕಂಡ ಜೀವಂತ ಉದಾಹರಣೆ. ಇದರಂತೆ ಅನೇಕರಿಗೆ ತಡವಾಗಿ ಸಂತಾನ ಸೌಖ್ಯ ಸಿಗುತ್ತದೆ.

ಸಂತತಿಯ ಸುಖವು ಇದೆಯೋ ಇಲ್ಲವೊ? ಸಂತಾನ ಯೋಗವು ಯಾವಾಗ ಇದೆ? ಯಾವ ವಯಸ್ಸಿನಲ್ಲಿದೆ? ಸಂತತಿಯಲ್ಲಿ ಗಂಡು-ಹೆಣ್ಣು ಗಳೆಷ್ಟು? ಈ ಎಲ್ಲ ಸಂಗತಿಗಳನ್ನು ವಧೂವರರ ಜಾತಕದಿಂದ ಹೇಳ ಬಹುದು.

## ಸಂತಾನಯೋಗ

ಲಗ್ನ ಕುಂಡಲಿಯಲ್ಲಿ ಪಂಚಮಸ್ಥಾನಕ್ಕೆ ಸುತಸ್ಥಾನವೆನ್ನುವರು. ಬೃಹಸ್ಪತಿಯು ಸಂತಾನಕಾರಕ ಗ್ರಹವು. ಅಗ್ನಿರಾಶಿಯು ವಂಧ್ಯಾ ರಾಶಿಯು. ವಿಷಮರಾಶಿಯು ಪುತ್ರ ಸಂತತಿಯನ್ನೂ ಸಮರಾಶಿಯು ಕನ್ಯಾಸಂತತಿಯನ್ನೂ ಕೊಡುವುವು: ರವಿ-ಮಂಗಳ-ಗುರು ಗ್ರಹಗಳು ಪುತ್ರಸಂತತಿಯನ್ನೂ ಶುಕ್ರ-ಚಂದ್ರರು ಕನ್ಯಾಸಂತತಿಯನ್ನೂ ಕೊಡುವರು. ಬುಧನು ರವಿ-ಮಂಗಳ ರೊಂದಿದ್ದರೆ ಪುತ್ರಸಂತತಿಯನ್ನೂ, ಶುಕ್ರ, ಚಂದ್ರರೊಂದಗಿದ್ದರೆ ಕನ್ಯಾ ಸಂತತಿಯನ್ನೂ ಕೊಡುವನು, ಬುಧನೊಬ್ಬನೇ ಪಂಚಮಸ್ಥಾನದಲ್ಲಿದ್ದು ವಿಷಮರಾಶಿಯಲ್ಲಿದ್ದರೆ ಪುತ್ರಸಂತತಿಯನ್ನೂ ಸಮರಾಶಿಯಲ್ಲಿದ್ದರೆ ಕನ್ಯಾ ಸಂತತಿಯನ್ನೂ ಕೊಡುವನು, ಬುಧನು ಸಂತತಿಗೆ ಅಪಾಯಕಾರಕನಲ್ಲ.

## ಸಂತತಿಸ್ಥಾನ

ಪಂಚಮಸ್ಥಾನವು ಇದು ಸಂತತಿಯ ಮುಖ್ಯಸ್ಥಾನವು. ಆದರೆ ಕೇವಲ ಪಂಚಮಸ್ಥಾನದಿಂದ ಹೇಳಲು ಬಾರದು. ಏಕೆಂದರೆ ಎಷ್ಟೋ ಜನರ ಕುಂಡಲಿಯಲ್ಲಿ ಪಂಚಮಸ್ಥಾನವು ಅಶುಭವಿದ್ದರೂ ಅವರಿಗೆ ಸಂತತಿ ಲಾಭ ಇರುತ್ತದೆ. ಅದ್ದರಿಂದ ೧-೫-೯-೩-೧೧-೭ ಈ ಸ್ಥಾನಗಳನ್ನು ನೋಡ ಬೇಕಾಗುವುದು. ಆದರಲ್ಲಿಯೂ ೫-೯-೧೧ ಈ ಸ್ಥಾನಗಳನ್ನು ವಿಶೇಷವಾಗಿ ನೋಡಬೇಕು.

## ರಾಶಿ

ಮೇಷ—ಅಲ್ಪಪ್ರಸವ, ಪುತ್ರಸಂತತಿಯು ವಿಶೇಷ.

ವೃಷಭ—ಮಾಧ್ಯಮಪ್ರಸವ, ಕನ್ಯಾಧಿಕ್ಯ,

ಮಿಥುನ—ಮಧ್ಯಪ್ರಸವ, ಪುತ್ರಾಧಿಕ್ಯ ಹಾಗೂ ಅವಳಿ-ಜವಳಿ ವಿಶೇಷ.
ಕರ್ಕ—ಬಹುಪ್ರಸವ, ಕನ್ಯಾಧಿಕ್ಯ.
ಸಿಂಹ—(ವಂಧ್ಯಾ) ಅತ್ಯಲ್ಪ ಪ್ರಸವ.
ಕನ್ಯಾ—ಬಹುಪ್ರಸವ, ಕನ್ಯಾಧಿಕ್ಯ, ಅವಳಿ-ಜವಳಿ ಹೆಚ್ಚು.
ತುಲಾ—ಅಲ್ಪಸಂತತಿ, ಪುತ್ರಾಧಿಕ್ಯ.
ವೃಶ್ಚಿಕ—ಮಧ್ಯಪ್ರಸವ, ಕನ್ಯಾಧಿಕ್ಯ.
ಧನು—ಅಲ್ಪಪ್ರಸವ, ಪುತ್ರಾಧಿಕ್ಯ.
ಮಕರ—ಬಹುಪ್ರಸವ, ಕನ್ಯಾಧಿಕ್ಯ.
ಕುಂಭ—ಅತ್ಯಲ್ಪ ಸಂತತಿ. ಪುತ್ರಾಧಿಕ್ಯ (ವಂಧ್ಯಾ).
ಮೀನ—ಬಹುಪ್ರಸವ, ಕನ್ಯಾಧಿಕ್ಯ.

## ನಕ್ಷತ್ರಗಳು

ಅಶ್ವಿನಿ—ಅಲ್ಪಪುತ್ರ, ಭರಣಿ—ಅಲ್ಪಕನ್ಯಾ, ಕೃತ್ತಿಕಾ—ಗರ್ಭಪಾತ, ರೋಹಿಣಿ—ಕನ್ಯಾಧಿಕ್ಯ, ಮೃಗಶಿರಾ—ಪುತ್ರಾಧಿಕ್ಯ, ಆರಿದ್ರಾ—ಮಧ್ಯಮ ಪ್ರಸವ. ಕನ್ಯಾಧಿಕ್ಯ, ಪುನರ್ವಸು—ಪುತ್ರಾಧಿಕ್ಯ, ಪುಷ್ಯ—ಕನ್ಯಾಧಿಕ್ಯ, ಆಶ್ಲೇಷಾ—ಅಲ್ಪಸಂತತಿ (ನಾಶ), ಮಘಾ—ವಂಧ್ಯಾ, ಪೂರ್ವಾ—ಪುತ್ರ ಹಸ್ತಾ—ಕನ್ಯಾಧಿಕ್ಯ, ಚಿತ್ರಾ—ಮಿಶ್ರ, ಸ್ವಾತಿ—ಅಲ್ಪಪುತ್ರ, ವಿಶಾಖಾ—ಸಂತತೀನಾಶ, ಅನುರಾಧಾ—ಕನ್ಯಾ, ಜ್ಯೇಷ್ಠಾ—ಸಂತತೀನಾಶ, ಮೂಲಾ—ಅಲ್ಪಪುತ್ರ, ಪೂ-ಆಷಾಢಾ—ಅಲ್ಪಪುತ್ರ, ಉತ್ತರಾಷಾಢಾ ಪುತ್ರಾಧಿಕ್ಯ, ಶ್ರವಣಾ—ಕನ್ಯಾಧಿಕ್ಯ, ಧನಿಷ್ಠಾ—ಸಂತತಿನಾಶ, ಶತತಾರಕಾ—ಪುತ್ರ (ವಂಧ್ಯಾ), ಪೂರ್ವಾಭಾದ್ರಪದಾ—ಪುತ್ರಾಧಿಕ್ಯ, ಉತ್ತರಾಭಾದ್ರಪದಾ—ಕನ್ಯಾಧಿಕ್ಯ, ರೇವತಿ—ಕನ್ಯಾಧಿಕ್ಯ.

## ನವಾಂಶ

ಹಿಂದೆ ರಾಶಿಗಳ ಗುಣಧರ್ಮ ಹೇಳಿದೆ. ಅವು ನವಾಂಶ ರೀತಿಯಿಂದ ಇವೆ. ರಾಶಿಗಳ ಗುಣಧರ್ಮ ಹಾಗೂ ನವಾಂಶಗಳಲ್ಲಿಯ ಗುಣ ಇವುಗಳಿಂದ ಸಂತಾನ ವಿಚಾರ ಮಾಡಬೇಕು. ಉದಾ:—ಸಿಂಹ ಈ ರಾಶಿಯು ಬಂಜೆ

ಇರುತ್ತದೆ. ಆದರೆ ನವಾಂಶದಲ್ಲಿಯೂ ಸಿಂಹವೇ ಇದ್ದರೆ ಬಂಜೆ ಎಂದು ತಿಳಿಯ ಬೇಕು. ಅದಿರದೆ ಕನ್ಯಾ ಇದ್ದರೆ, ಅಲ್ಪ ಸಂತತಿ ಲಭಿಸುವುದು.

## ಗ್ರಹ

ರವಿ—ಸಂತತಿಮಾರಕ, ಪುತ್ರಸಂತತಿ, ಅಲ್ಪಸಂತಾನ.

ಚಂದ್ರ—ವಿಪುಲಸಂತತಿ, ಕನ್ಯಾಧಿಕ್ಯ, ಬೇಗ ಬೇಗ ಸಂತಾನ ಕೊಡುವ ಗ್ರಹ.

ಕುಜ—ಮಧ್ಯಮಸಂತತಿ, ಪುತ್ರಾಧಿಕ್ಯ, ಗರ್ಭಪಾತ ಹಾಗೂ ಸಂತತಿಗೆ ಅಪಾಯಕಾರಕ.

ಬುಧ—ಪುತ್ರಾಧಿಕ್ಯ, ಅಲ್ಪಸಂತತಿ.

ಗುರು—ಸಂತತಿಪೋಷಕ, ಬಹುಸಂತತಿ ಸಂತತಿಕಾರಕ, ಪುತ್ರಾಧಿಕ್ಯ.

ಶುಕ್ರ—ಸಂತತಿಪೋಷಕ, ಕನ್ಯಾಧಿಕ್ಯ, ವಿಪುಲ ಸಂತತಿ.

ಶನಿ—ಮಧ್ಯಮ, ಸಂತತಿನಾಶಕ, ಅನಿಯಮಿತ ಕಾಲಕ್ಕೆ ಸಂತಾನೋತ್ಪತ್ತಿ.

ರಾಹು-ಕೇತು—ಸಂತತಿ ಹಾಗೂ ಗರ್ಭಕ್ಕೆ ಮಾರಕ, ಅಲ್ಪ ಸಂತತಿ ಹಾಗೂ ವಿಚಿತ್ರ ಸಂತತಿ

## ಗ್ರಹಯೋಗ

ಸಂತತಿಕಾರಕ ಗ್ರಹವಾದ ಬೃಹಸ್ಪತಿಯು ಅದರಲ್ಲಿಯೂ ಪುತ್ರಾಧಿಕ್ಯ. ನಾದ ಬೃಹಸ್ಪತಿಯು ಕುಂಡಲಿಯಲ್ಲಿ ದೋಷ, ನಿರ್ಬಲ, ಅಸ್ತ, ವಕ್ರೀ, ನೀಚ ಪಾಪಗ್ರಹಯುಕ್ತ, ಹೀಗೆ ಅಬಲನಿರಬಾರದು.

ಗುರು-ಮಂಗಳ ಯುತಿ ದುಷ್ಟನಕ್ಷತ್ರದಲ್ಲಿ ಇದ್ದರೆ, ಅದು ಮಾರಕವು.

## ಸಂತಾನಯೋಗ

(೧) ಕುಂಡಲಿಯಲ್ಲಿಯ ಪಂಚಮಸ್ಥಾನವು ಜಲಚರರಾಶಿಯಿಂದ ಕೂಡಿದ್ದು, ಗುರು, ಶುಕ್ರ, ಚಂದ್ರ ಮೊದಲಾದ ಶುಭಗ್ರಹಗಳು ಇದ್ದರೆ

ಅಥವಾ ಗ್ರಹಗಳ ಯೋಗವಿದ್ದರೆ ಅಥವಾ ದೃಷ್ಟಿ ಇದ್ದರೆ ಬಹುಪ್ರಸವ ಇರುತ್ತದೆ.

(೨) ಕುಂಡಲಿಯಲ್ಲಿಯ ಪಂಚಮಸ್ಥಾನವು ವಾಯುರಾಶಿ ಇದ್ದು ಶುಭ ಗ್ರಹಗಳ ದೃಷ್ಟಿ ಅಥವಾ ಶುಭಗ್ರಹಗಳ ಯುತಿ ಇದ್ದರೆ, ಮಧ್ಯಮ ಪ್ರಸವ ಆಗುತ್ತದೆ.

(೩) ಕುಂಡಲಿಯಲ್ಲಿಯ ಪಂಚಮಸ್ಥಾನವು ಪೃಥ್ವಿರಾಶಿ ಇದ್ದು ಶುಭ ಗ್ರಹಗಳ ಯೋಗವಿದ್ದರೆ ಅತ್ಯಲ್ಪ ಸಂತತಿ.

(೪) ಕುಂಡಲಿಯಲ್ಲಿಯ ಪಂಚಮಸ್ಥಾನವು ಅಗ್ನಿರಾಶಿ ಇದ್ದು ಶುಭ ಗ್ರಹಗಳ ಯೋಗವಿದ್ದರೆ ಅತ್ಯಲ್ಪ ಸಂತತಿ.

(೫) ಕುಂಡಲಿಯಲ್ಲಿಯ ಪಂಚಮಸ್ಥಾನವು ಅಗ್ನಿರಾಶಿ ಇದ್ದು ಶನಿ ಅಥವಾ ರಾಹು ಇದ್ದರೆ ಸಂತತಿಯು ಅಭಾವ ಇರುತ್ತದೆ.

(೬) ಕುಂಡಲಿಯಲ್ಲಿಯ ಪಂಚಮಸ್ಥಾನದಲ್ಲಿ ಶನಿ ಇದ್ದರೆ ವಿಲಂಬವಾಗಿ ಸಂತಾನ ಕೊಡುವನು.

(೭) ಪಂಚಮಸ್ಥಾನವು ವೃಷಭ, ಕರ್ಕ, ತುಲಾ, ವೃಶ್ಚಿಕ, ಮಕರಗಳಿದ್ದು ಶನಿ ಅಲ್ಲಿಯೇ ಇದ್ದರೆ, ಹೆಣ್ಣು ಸಂತಾನ ಬಹಳ.

(೮) ಸಂತತಿಕಾರಕ ಗ್ರಹವಾದ ಬೃಹಸ್ಪತಿಯು ಪಂಚಮದಲ್ಲಿ ಬಲಾಢ್ಯನಿದ್ದರೆ, ಗಂಡು ಸಂತತಿಯು ಬಹಳ.

(೯) ಪಂಚಮಸ್ಥಾನದಲ್ಲಿ ಶುಕ್ರ ಅಥವಾ ಚಂದ್ರನಿದ್ದರೆ ಹೆಣ್ಣು ಸಂತಾನ ಬಹಳ.

(೧೦) ಪಂಚಮ, ನವಮ, ತೃತೀಯ, ಸಪ್ತಮ, ಏಕಾದಶ ಈ ಸ್ಥಾನಗಳಲ್ಲಿ ಬಲಾಢ್ಯ ಗುರು, ಶುಕ್ರ, ಚಂದ್ರ, ರವಿ ಇವರ ಯೋಗ ದೃಷ್ಟಿ, ಯುತಿ ಇದ್ದರೆ ಸಂತತಿ ವಿಪುಲ.

ಸಂತತಿಯು ಯಾವ ವರ್ಷದಲ್ಲಿ ಆಗುತ್ತದೆ ಎಂಬುದರ ಬಗ್ಗೆ ಹೇಳಬೇಕಾದರೆ ಮುಖ್ಯವಾಗಿ ಐದು ಸಂಗತಿಗಳನ್ನು ಪರಿಶೀಲಿಸಬೇಕು :

(೧) ಜನ್ಮಕುಂಡಲಿಯಲ್ಲಿದ್ದ ಗ್ರಹಗಳ ಬಲಾಬಲ.

(೨) ಗೋಚರಿ ಗ್ರಹಗಳ ಬಲಾಬಲ.

(೩) ಗೋಚರೀಗ್ರಹಗಳ ಪರಿಭ್ರಮಣ–ಜನ್ಮಕುಂಡಲಿಯ ಸ್ಥಾನಗಳ ಮೇಲಿಂದ.

(೪) ಗ್ರಹಗಳ ದಶಾ-ಅಂತರ್ದಶಾ.

(೫) ಪಂಚಮ ಹಾಗೂ ಸಾಡೇಸಾತಿ ಶನಿಯ ಪರಿಣಾಮ.

(೧) (ಅ) ಜನ್ಮ ಕುಂಡಲಿಯಲ್ಲಿ ಪಂಚಮ ಹಾಗೂ ನವಮ ಸ್ಥಾನಗಳು ಗುರುವಿನ ಶುಭದೃಷ್ಟಿಯಲ್ಲಿರಬೇಕು.

(ಬ) ಪಂಚಮಾಧಿಪತಿ ಅಥವಾ ನವಮಾಧಿಪತಿ ಅಸ್ತ, ವಕ್ರೀ ನೀಚ, ಪಾಪಗ್ರಹಗಳ ಮಧ್ಯ, ಪಾಪಗ್ರಹಗಳಿಂದ ದೂಷಿತ ಇರಕೂಡದು

(೨) ಗೋಚರಿಯಿಂದ ರವಿ, ಗುರು, ಶುಕ್ರರು, ಶುಭದಾಯಕರಾಗಿದ್ದರೆ ಆ ಕಾಲದಲ್ಲಿ ಸಂತಾನ ಲಭಿಸುವದು.

(೩) (ಅ) ಗೋಚರೀ ಗುರು, ಶುಕ್ರ, ರವಿ ಇವರ ಪರಿಭ್ರಮಣವು ಪಂಚಮ, ನವಮ, ಏಕಾದಶ, ತೃತೀಯ, ಸಪ್ತಮ ಸ್ಥಾನಗಳಿಂದ ಆದರೆ ಸಂತಾನ ಸುಖ ಲಭಿಸುವದು.

(ಬ) ಗೋಚರೀ ಗುರುವು ಜನ್ಮರಾಶಿಯಿಂದ ೨-೫-೭-೯-೩ ಈ ಸ್ಥಾನಗಳಿಂದ ಪರಿಭ್ರಮಣದ ಕಾಲದಲ್ಲಿ ಸಂತತಿಸುಖ ಸಿಗುತ್ತದೆ.

(ಕ) ಗೋಚರೀ ಗುರುವಿನ ಪರಿಭ್ರಮಣವು ಜನ್ಮಲಗ್ನದಲ್ಲಿಂದ ಆಗುತ್ತಿದ್ದಾಗ ಸಂತತಿಸುಖ ಸಿಗುತ್ತದೆ.

(ಡ) ಗೋಚರೀ ಗುರುವಿನ ಪರಿಭ್ರಮಣವು ಪಂಚಮ, ನವಮ ಸ್ಥಾನಗಳ ಮೇಲಿಂದ ಆಗುವಾಗ ಸಂತಾನಸುಖ ಸಿಗುತ್ತದೆ.

(ಇ) ಗೋಚರೀ ಶುಕ್ರನ ಪರಿಭ್ರಣವು ಪಂಚಮ, ನವಮ ಏಕಾದಶ, ತೃತೀಯ ಸ್ಥಾನಗಳ ಮೇಲಿಂದ ಆಗುತ್ತಿದ್ದಾಗ ಸಂತತಿಸುಖ ಸಿಗುತ್ತದೆ.

(ಫ) ಯಾರ ಜನ್ಮಲಗ್ನ ಹಾಗೂ ಜನ್ಮರಾಶಿ ಒಂದೇ ಇದ್ದು, ಗೋಚರೀಗುರು, ಲಗ್ನ ಪಂಚಮ, ನವಮಸ್ಥಾನಗಳ ಮೇಲಿಂದ ಪರಿಭ್ರಮಣ ಮಾಡುವಾಗ ಖಾತ್ರಿದಾಯಕವಾಗಿ ಸಂತತಿ ಆಗುತ್ತದೆ.

(೨) ಮಂಗಳನೊಂದಿಗೆ ಗುರುವಿನದು ಅಂಶಾತ್ಮಕವೂ ಕೂಡ ಮಾರಕವಾಗುತ್ತದೆ.

(೩) ಪಂಚಮಾಧಿಪತಿ ಹಾಗೂ ನವಮಾಧಿಪತಿಗಳು ಅಸ್ತ, ವಕ್ರೀ,

ನೀಚ, ಶತ್ರುಕ್ಷೇತ್ರೀ, ಪಾಪಗ್ರಹಯುಕ್ತ, ಪಾಪಗ್ರಹದೂಷಿತ, ಗುರು-ಶುಕ್ರದೃಷ್ಟಿರಹಿತ, ಹೀಗೆ ಯೋಗವಿದ್ದರೆ, ಸಂತತಿಯ ಸುಖ ಸಿಗಲಾಗದು.

೪) ಶನಿ-ಮಂಗಳ, ಶನಿ-ರವಿ, ಶನಿ-ರಾಹು, ಶನಿ-ಬುಧ ಇವರ ಯುತಿಯು ಪಂಚಮ, ಏಕಾದಶ, ನವಮ, ಸಪ್ತಮ, ಲಗ್ನ, ತೃತೀಯ ಈ ಸ್ಥಾನಗಳಿದ್ದರೆ ಸಂತಾನ ಸೌಖ್ಯ ಕಡಿಮೆ ಹಾಗೂ ಸಂತಾನಕ್ಕೆ ತೊಂದರೆ (ಗುರು ದೃಷ್ಟಿರಹಿತ ಪಂಚಮ)

೫) ಶನಿ-ಮಂಗಳ, ಶನಿ-ರವಿ, ಶನಿ-ರಾಹು, ಶನಿ-ಬುಧ ಇವರ ಸಮ ಸಪ್ತಕವು ಪಂಚಮ-ಏಕಾದಶ, ತೃತೀಯ-ನವಮ, ಲಗ್ನ-ಸಪ್ತಮ ಈ ಯಾವುದೇ ಸ್ಥಾನಗಳಲ್ಲಿ ಆದರೂ (ಗುರುದೃಷ್ಟಿರಹಿತ ಪಂಚಮಸ್ಥಾನ) ಸಂತಾನಕ್ಕೆ ತೊಂದರೆ ಹಾಗೂ ಅಲ್ಪಸಂತಾನ.

೬) ಗುರು-ಶನಿಗಳ ಯುತಿಯು ದುಷ್ಟನಕ್ಷತ್ರದಲ್ಲಿ ಆದರೆ, ಸಂತತಿಯ ಅಭಾವ.

೭) ಗುರುವಿನಿಂದ ಶನಿಯು ೫-೯, ೩ನೆಯ ಸ್ಥಾನಗಳಲ್ಲಿ ಅಂಶಾತ್ಮಕ ಇದ್ದರೆ. ಸಂತತಿಯ ಅಭಾವ ಅಥವಾ ಪುತ್ರಸಂತತಿಯ ಅಭಾವ.

೮) ಗುರುವಿನಿಂದ ಶನಿ ೫-೯-೩ ಅಂಶಾತ್ಮಕವಾಗಿ ವಂಧ್ಯಾರಾಶಿ ಯಲ್ಲಿ ದುಷ್ಟನಕ್ಷತ್ರಗಳಿದ್ದರೆ ಸಂತತಿಯ ಅಭಾವ ಇತರ ನಕ್ಷತ್ರಗಳಿದ್ದರೆ ಕನ್ಯಾಸಂತತಿ ಹೆಚ್ಚು.

೯) ಪಂಚಮ, ಸಪ್ತಮ, ನವಮಸ್ಥಾನದಲ್ಲಿ, ಪಾಪಗ್ರಹಗಳು ಅಧಿಕವಿದ್ದರೆ ಸಂತಾನಕ್ಕೆ ತ್ರಾಸದಾಯಕವು.

೧೦) ಚಂದ್ರನಿಂದಲೂ ಲಗ್ನದಿಂದಲೂ ಗುರುವು, ನವಮ ಅಥವಾ ಪಂಚಮದಲ್ಲಿ ಉಚ್ಚ ಸ್ವಕ್ಷೇತ್ರೀ ಇದ್ದು, ನಿರ್ದೋಷಿ ಇದ್ದರೆ ಮೊಮ್ಮಗ, ಮರಿಮಗನ ಸೌಖ್ಯ ಲಭಿಸುತ್ತದೆ,

೧೧) ಕುಂಡಲಿಯಲ್ಲಿ ಶುಭಗ್ರಹಗಳು ತ್ರಿಕೋಣದಲ್ಲಿದ್ದರೆ ಪುತ್ರಸೌಖ್ಯ ದೊರೆಯುತ್ತದೆ.

೧೨) ಗುರುವು ಸ್ತ್ರೀ ರಾಶಿಯಲ್ಲಿದ್ದು, ಅವನ ನವಾಂಶದಲ್ಲಿ ಶುಕ್ರ ಅಥವಾ ಚಂದ್ರನಿದ್ದರೆ ಮಗಳ ಕಡೆಯಿಂದ ಮೊಮ್ಮಗನ ಸೌಖ್ಯ ಲಭಿಸುತ್ತದೆ.

(೪) ಗುರುವು ಜಲಚರ ರಾಶಿಯಲ್ಲಿದ್ದು ಪಂಚಮ, ನವಮ ಸ್ಥಾನಗಳಲ್ಲಿ ಇದ್ದರೆ ಸಂತತಿಯ ಸೌಖ್ಯ ಹೆಚ್ಚು.

(೫) ಗುರುವು ಜಲಚರ ರಾಶಿಯಲ್ಲಿದ್ದು ಪಂಚಮ-ನವಮಸ್ಥಾನದಲ್ಲಿಯೂ ಬಲಾಢ್ಯನಿದ್ದು. ಅವನ ನವಾಂಶದಲ್ಲಿ ಇಜನಿದ್ದರೆ ಪುತ್ರನಿಂದ ವೊಮ್ಮಗನ ಸುಖ ಲಭಿಸುವದು.

(೬) ಸಂತತಿಯ ವಿಚಾರ ಮಾಡುವಾಗ ರಾಹುಗ್ರಹದ ಸ್ಥಿತಿ, ದೃಷ್ಟಿ ಬಲಾಬಲಾದಿಗಳನ್ನು ಸೂಕ್ಷ್ಮ ಪರಿಶೀಲಿಸಬೇಕು. ಏಕೆಂದರೆ ರಾಹುಗ್ರಹವು ಗರ್ಭಪಾತ ಸಂತಾನಮಾರಕ ಇದ್ದಾನೆ.

ಗುರು-ಚಂದ್ರ, ಗುರು-ಶುಕ್ರ, ಚಂದ್ರ-ಶುಕ್ರ, ಇವರ ಯುತಿಯು ಪಂಚಮ-ಏಕಾದಶ, ನವಮ-ಲಗ್ನ, ಸಪ್ತಮ ತೃತೀಯ-ನವಮ ಈ ಯಾವುದೇ ಸ್ಥಾನದಲ್ಲಿದ್ದರೂ ವಿಪುಲಸಂತತಿ ಹಾಗೂ ಸಂತತಿ ಸೌಖ್ಯ ಸಿಗುವುದು.

ಗುರು-ಚಂದ್ರ, ಶುಕ್ರ-ಚಂದ್ರ, ಗುರು-ಶುಕ್ರ ಇವರ ಸಮಸಪ್ತಕವು ಪಂಚಮ, ಏಕಾದಶ, ಲಗ್ನ, ಸಪ್ತಮ ತೃತೀಯ ನವಮ ಈ ಯಾವುದೇ ಸ್ಥಾನಗಳಲ್ಲಿ ಆದರೂ ಸಂತಾನಸೌಖ್ಯ ಸಿಗುತ್ತದೆ. (ವಿಪುಲ ಸಂತತಿ).

ಪಂಚಮ ಹಾಗೂ ನವಮಾಧಿಪತಿಗಳು ಬಲಾಢ್ಯರಿದ್ದು, ಗುರು-ಶುಕ್ರ-ಚಂದ್ರ ಇವರೊಂದಿಗೆ ಅಥವಾ ಇವರ ದೃಷ್ಟಿಗಳಲ್ಲಿ ಇದ್ದರೆ ಸಂತಾನ ಸೌಖ್ಯ ಸಿಗುತ್ತದೆ.

ಪಂಚಮಾಧಿಪತಿಯು ಪಂಚಮದಲ್ಲಿದ್ದರೆ ಸಂತತಿಯ ಸುಖವು ದೊರೆಯುತ್ತದೆ. ಜಾತಕನು ಚಂಚಲಮನೋವೃತ್ತಿಯವನಿರುತ್ತಾನೆ. ಅವನು ಕಠೋರ ಭಾಷಣಕಾರನು ಆದರೆ ಧರ್ಮಭೀರುವು ಇರುತ್ತಾನೆ

ಪಂಚಮಾಧಿಪತಿಯು ಷಷ್ಠದಲ್ಲಿ ಇಲ್ಲವೇ ದ್ವಾದಶದಲ್ಲಿ ಇದ್ದರೆ ಪುತ್ರರು ವೈರತ್ವವನ್ನು ಬೆಳೆಸುತ್ತಾರೆ. ಮೃತ್ಯುಸಮ ಪೀಡೆಯಿಂದಲೂ ಸಂತತಿಯು ಬದುಕುತ್ತದೆ. ಕ್ರೂರ ಗ್ರಹಗಳಿದ್ದರೆ ದತ್ತಕಯೋಗವೂ ಕೂಡಿಬರುತ್ತದೆ.

ಪಂಚಮಾಧಿಪತಿಯು ಸಪ್ತಮದಲ್ಲಿದ್ದರೆ ಜಾತಕನು ಕಲಾವಂತನೂ ಸತ್ಯಾಚಾರವುಳ್ಳವನೂ ಆಗುತ್ತಾನೆ.

ಪಂಚಮೇಶನು ಅಷ್ಟಮ ಇಲ್ಲವೆ ಧನಸ್ಥಾನದಲ್ಲಿದ್ದರೆ ಬಹುಮಿತ್ರ ಯುತನಾಗುತ್ತಾನೆ. ಆದರೆ ಜಾತಕನಿಗೆ ಉದರರೋಗವು ಇರುತ್ತದೆ. ಧನ ಸಂಪನ್ನನೂ ಕ್ರೋಧಿಯೂ ಇರುತ್ತಾನೆ.

ಪಂಚಮೇಶನು ನವಮ ಇಲ್ಲವೆ ದಶಮದಲ್ಲಿದ್ದರೆ. ಜಾತಕನ ಪುತ್ರನು ರಾಜಸನ್ಮಾನ ಹೊಂದುವನಾಗುತ್ತಾನೆ. ಇಲ್ಲವೆ ದೊಡ್ಡ ಪದವಿಯುಳ್ಳವ ನಾಗುತ್ತಾನೆ. ಪುತ್ರನು ಕುಲದೀಪಕನೂ ಪ್ರಖ್ಯಾತನೂ ಆಗುತ್ತಾನೆ.

ಪಂಚಮೇಶನು ಲಾಭಸ್ಥಾನದಲ್ಲಿದ್ದರೆ ಪಂಡಿತನೂ ಗ್ರಂಥಕರ್ತನೂ ಕಾರ್ಯದಕ್ಷತೆಯುಳ್ಳವನೂ ಅನೇಕ ಪುತ್ರಯುತನೂ ಸಂಪತ್ತಿಯುಳ್ಳವನೂ ಆಗುತ್ತಾನೆ.

ಪಂಚಮೇಶನು ಲಗ್ನದಲ್ಲಿ ಅಥವಾ ತೃತೀಯದಲ್ಲಿ ಇದ್ದರೆ, ಮಾಯಾವಿ, ವಿಶ್ವಾಸಘಾತಕನು, ಕಿಡಗೇಡಿ ಸ್ವಭಾವದ ಮನುಷ್ಯನಾಗುತ್ತಾನೆ.

ಪಂಚಮೇಶನು ಚತುರ್ಥದಲ್ಲಿ ಇದ್ದರೆ, ಮಾತೃಸೌಖ್ಯವೂ ಹೆಚ್ಚು ಸಂಪತ್ತಿಯುಳ್ಳವನೂ ಬುದ್ಧಿವಂತನೂ ಪ್ರಮುಖ ಪಾತ್ರವನ್ನು ವಹಿಸು ವವನೂ ಆಗುತ್ತಾನೆ.

೪) (ಅ) ಪಂಚಮಾಧಿಪತಿ ಅಥವಾ ನವಮಾಧಿಪತಿಗಳ ದಶಾ- ಅಂತರ್‌ದಶೆಯಲ್ಲಿ ಸಂತಾನಪ್ರಾಪ್ತಿ ಆಗುತ್ತದೆ.

(ಬ) ಗುರು–ಶುಕ್ರರ ದಶಾ–ಅಂತರದಶೆಯಲ್ಲಿ ಸಂತಾನಪ್ರಾಪ್ತಿ ಆಗುತ್ತದೆ.

(ಕ) ಜನ್ಮಕುಂಡಲಿಯಲ್ಲಿರುವ ಏಕಾದಶ ಸ್ಥಾನದಲ್ಲಿರುವ ಗ್ರಹ ಗಳ ದಶಾ-ಅಂತರ್‌ದಶೆಯಲ್ಲಿ ಸಂತಾನಲಾಭ ಆಗುತ್ತದೆ.

(ಡ) ಜನ್ಮಕುಂಡಲಿಯಲ್ಲಿರುವ ತೃತೀಯ ಸಪ್ತಮ ಸ್ಥಾನದಲ್ಲಿ ಇರುವ ಗ್ರಹಗಳ ದಶಾ–ಅಂತರ್‌ದಶೆಯಲ್ಲಿ ಸಂತಾನಲಾಭ ಆಗುತ್ತದೆ.

(ಇ) ಲಗ್ನಾಧಿಪತಿ ಶುಭಗ್ರಹವಿದ್ದು, ಅವನ ದಶಾ–ಅಂತರ್‌ ದಶೆಯಲ್ಲಿ ಸಂತಾನಸುಖ ಸಿಗುತ್ತದೆ.

(ಫ) ಪಂಚಮಾಧಿಪತಿ ಅಥವಾ ನವಮಾಧಿಪತಿಗಳು ಗೋಚರಿಯಿಂದ ಶುಭವಿದ್ದು, ಪಂಚಮ ನವಮ ಸ್ಥಾನಗಳ ಮೇಲಿಂದ ಪರಿ ಭ್ರಮಣ ಮಾಡುವಾಗ ಸಂತಾನಪ್ರಾಪ್ತಿ ಆಗುತ್ತದೆ.

## ಸಂತತಿಸುಖ

(೧) ಪಂಚಮ ಸ್ಥಾನದಲ್ಲಿ ಶನಿ-ಮಂಗಳನಿದ್ದರೆ ಅಥವಾ ಶನಿ-ರಾಹು ಇದ್ದರೆ, ವಿಲಂಬ ಸಂತಾನವಾಗುವುದು.

(೨) ಎರಡು ಪಾಪಗ್ರಹಗಳ ಮಧ್ಯದಲ್ಲಿ ಬೃಹಸ್ಪತಿ ಇದ್ದು, ಪಂಚಮಾಧಿಪತಿ ಅಸ್ತನಾಗಿ ಶತ್ರುಕ್ಷೇತ್ರದಲ್ಲಿದ್ದರೆ ಸಂತತಿ ಸುಖ ಸಿಗುವದಿಲ್ಲ.

(೩) ಪಂಚಮಸ್ಥಾನದಲ್ಲಿ ಪಾಪಗ್ರಹಗಳಿದ್ದು, ಪಂಚಮಾಧಿಪತಿ ನೀಚನಾಗಿ ಪಾಪಗ್ರಹಗಳಿಂದ ದೃಷ್ಟಿಸಲ್ಪಡುತ್ತಿದ್ದರೆ, ಸಂತತಿಸುಖ ಸಿಗುವದಿಲ್ಲ.

(೪) ಷಷ್ಠಾಧಿಪತಿಯು ಪಂಚಮದಲ್ಲಿಯೂ ಪಂಚಮಾಧಿಪತಿ ಷಷ್ಠದಲ್ಲಿಯೂ ನೀಚ ಹಾಗೂ ಅಸ್ತನಿದ್ದರೆ ಸಂತತಿ ಸುಖ ಸಿಗಲಾರದು.

## ವಂಧ್ಯಾಯೋಗ

(೧) ಲಗ್ನ ಹಾಗೂ ಪಂಚಮಸ್ಥಾನವು ಅಗ್ನಿರಾಶಿ ಇದ್ದು, ಅಲ್ಲಿಯೇ ಶನಿ ಇದ್ದರೆ

(೨) ಕುಂಭರಾಶಿಯ ಶನಿ ಪಂಚಮದಲ್ಲಿದ್ದರೆ

(೩) ಪಂಚಮ ಸ್ಥಾನದಲ್ಲಿ ಮೂರು ಪಾಪಗ್ರಹಗಳಿದ್ದರೆ

(೪) ಸಂತತಿಕಾರಕ ಗ್ರಹ ಅಸ್ತ ಇದ್ದು ೬-೮-೧೨ರಲ್ಲಿದ್ದರೆ

(೫) ಪಂಚಮಸ್ಥಾನದಲ್ಲಿ ಚಂದ್ರ-ರಾಹುಗಳ ಅಂಶಾತ್ಮಕವಿದ್ದರೆ

(೬) ಪಂಚಮಸ್ಥಾನವು ಅಗ್ನಿರಾಶಿ ಇದ್ದು, ಶನಿ-ರಾಹುಗಳ ಯುತಿ ಇದ್ದರೆ

(೭) ಪಂಚಮಸ್ಥಾನದಲ್ಲಿ ಶನಿ, ಮಂಗಳ, ರವಿ ಇವರ ಅಂಶಾತ್ಮಕ ಯುತಿ ಇದ್ದರೆ

ಹೀಗೆ ಮೇಲೆ ಕಾಣಿಸಿದ ಕಾರಣಗಳಿಂದ ಕೂಡಿದ್ದರೆ ವಂಧ್ಯಾಯೋಗ ಬರುತ್ತದೆ.

ವಿ. ಸೂಚನೆ :— ಸಂತತಿ ಹಾಗೂ ಸಂತಾನ ಸೌಖ್ಯದ ವಿಷಯವಾಗಿ ನಮ್ಮ ಸ್ತ್ರೀಜ್ಯೋತಿಷ್ಯ ಗ್ರಂಥದ ಪುಟ ೯೨ ರಿಂದ ೧೧೮ ಪುಟಗಳವರೆಗೆ ವಿವರವಾಗಿ ವಿವರಿಸಲಾಗಿದೆ.

# ೮. ವಧೂ-ವರರ ಮಾದರಿಯ ಕುಂಡಲಿಗಳು

ಈ ಪ್ರಕರಣದಲ್ಲಿ ಅಭ್ಯಾಸಕ್ಕೆ ಉಪಯುಕ್ತವಾಗುವಂತೆ ಕೆಲವು ಮಾದರಿಯ ಕುಂಡಲಿಗಳನ್ನು ಕೊಟ್ಟು ವಿವೇಚಿಸಿದ್ದೇವೆ.

**ಮಾದರಿ ೧**

ವಧು

| | | | |
|---|---|---|---|
| ಲ ಚಂ ಬು ಶ | ರ | | ಗು |
| ಶು | | | ರಾ |
| ಕೇ | | | |
| ಮಂ | | | |

ವರ

| | | | |
|---|---|---|---|
| | ಕೇ | ಮಂ | |
| ಬು ಶು | | | |
| ಲ ರ ಶ ಚಂ ಗು | | | |
| | | ರಾ | |

**ನಕ್ಷತ್ರ**—ರೇವತಿ; ಚರಣ ೨; **ರಾಶಿ**—ಮೀನ; ಗಣ—ದೇವ; **ನಾಡಿ**—ಅಂತ್ಯ; ಯೋನಿ, ಗಜ;

**ನಕ್ಷತ್ರ**—ಧನಿಷ್ಠಾ; ಚರಣ ೧; **ರಾಶಿ**—ಮಕರ; ನಾಡಿ—ಮಧ್ಯ; **ಗಣ**—ರಾಕ್ಷಸ; ಯೋನಿ—ಸಿಂಹ;

ಮೇಲೆ ತೋರಿಸಿದ ಕುಂಡಲಿಗಳ ಬಗ್ಗೆ ಈಗ ವಿಚಾರಿಸುವಾ: ವಧೂ-ವರರದು ಭಿನ್ನ ಭಿನ್ನ ನಾಡಿ ಇರುವದರಿಂದ ೮ ಗುಣ; ದೇವ ಹಾಗೂ ರಾಕ್ಷಸ ಗಣ ಇರುವ ಕಾರಣ ೧ ಗುಣ; ಗಜ ಹಾಗೂ ಸಿಂಹಯೋನಿ ಇರುವ ಕಾರಣ ಶೂನ್ಯ ಗುಣ; ಸತ್‌ಕೂಟ ಇರುವುದರಿಂದ ೭ ಗುಣ, ಗ್ರಹ ಮಿತ್ರತ್ವ ವಿರುವುದರಿಂದ ೩ ಗುಣ; ತಾರಾಬಲ ಬರುವುದರಿಂದ ೧ ೧/೨ ಗುಣ; ಇಬ್ಬರದೂ ಜಲಚರರಾಶಿ ಇರುವುದರಿಂದ ವಶ್ಯ, ಇದಕ್ಕೆ ೨ ಗುಣ; ವರ್ಣವಿಚಾರಕ್ಕೆ ೧ ಗುಣ.

ಹೀಗೆ ೨೩॥ ಗುಣ ಬರುತ್ತವೆ ಹಾಗೂ ವಧೂವರರಿಗೆ ದೋಷೀ ಮಂಗಳನೂ ಇರುವದಿಲ್ಲ. ಆದುದರಿಂದ ಇಂಥ ವಧೂವರರ ವಿವಾಹ ಮಾಡಬಹುದು.

## ಮಾದರಿ ೨

**ವಧು**

| | | | |
|---|---|---|---|
| ಶ | | | |
| | | | ರಾ. ರ ಬು ಗು ಶು |
| ಲ ಕೇ | | | ಚಂ |
| ಮಂ | | | |

**ವರ**

| | | | |
|---|---|---|---|
| ರ ಶ: | | ಕೇ | |
| ಲ ಬು | | | |
| | | | ಮಂ |
| ಗು ಶ | ರಾ | | ಚಂ |

**ನಕ್ಷತ್ರ**--ಮಘಾ; ಚರಣ—೧;
**ರಾಶಿ**—ಸಿಂಹ; ಗಣ—ರಾಕ್ಷಸ
**ನಾಡಿ-ಅಂತ್ಯ**; ಯೋನಿ-ಮೂಷಕ
**ವರ್ಣ**—ಕ್ಷತ್ರಿಯ

**ನಕ್ಷತ್ರ**—ಚಿತ್ರಾ ; ಚರಣ ೧ ;
**ರಾಶಿ**—ಕನ್ಯಾ; ಗಣ—ರಾಕ್ಷಸ;
**ನಾಡಿ-ಮಧ್ಯ**; ಯೋನಿ-ವ್ಯಾಘ್ರ;
**ವರ್ಣ**—ವೈಶ್ಯ

ಇಲ್ಲಿ ಭಿನ್ನ ಭಿನ್ನ ನಾಡಿ ಇರುವದರಿಂದ ೮ ಗುಣ, ಇಬ್ಬರಿಗೂ ಒಂದೇ ಗಣವಿರುವದರಿಂದ ೬ ಗುಣ ; ಕೂಟಸಂಬಂಧದಲ್ಲಿ ದ್ವಿದ್ವಾದಶಕ ಇರುವದರಿಂದ ಶೂನ್ಯಗುಣ; ಗ್ರಹಮಿತ್ರತ್ವದಲ್ಲಿ ೪ ಗುಣ; ಯೋನಿ ವಿಚಾರದಲ್ಲಿ ೨ ಗುಣ; ತಾರಾಬಲ ಶೂನ್ಯಗುಣ ಹಾಗೂ ವಶ್ಯವಿಚಾರದಲ್ಲಿಯೂ ಶೂನ್ಯ ಗುಣ. (ವನಚರ ಮಾನವ): ವರ್ಣವಿಚಾರದಲ್ಲಿಯೂ ಶೂನ್ಯಗುಣ ಹೀಗೆ ೨೦ ಗುಣಗಳಾಗುತ್ತವೆ. ಅಲ್ಲದೆ ಮಂಗಳವಿಚಾರ ಮಾಡುವಾಗ ಇಬ್ಬರಿಗೂ ದೋಷೀ ಮಂಗಳನು ಇರುವನು. ಆದುದರಿಂದ ಇಂತಹ ಜೋಡಿಯು ವಿವಾಹ ಮಾಡಬಹುದು.

## ಮಾದರಿ ೩

ವಧು

| ಶ | | ರಾ | ಬು ಶು |
|---|---|---|---|
| ಮಂ | | | ಲ ರ |
| | | | ಗು |
| ಚಂ | ಕೇ | | |

ವರ

| | ಗು | | ರಾ |
|---|---|---|---|
| | | | |
| ಶ | | | ಚಂ ಮಂ |
| ಕೇ | | ಶು | ಬು ಲ ರ |

ನಕ್ಷತ್ರ — ಮೂಲಾ; ಚರಣ-೨
ರಾಶಿ — ಧನು; ಗಣ — ರಾಕ್ಷಸ;
ನಾಡಿ — ಆದ್ಯ; ಯೋನಿ-ಶ್ವಾನ;
ವರ್ಣ — ಕ್ಷತ್ರಿಯ; ವಶ್ಯ-ಮಾನವ

ನಕ್ಷತ್ರ — ಮಘಾ; ಚರಣ ೩
ರಾಶಿ — ಸಿಂಹ; ಗಣ-ರಾಕ್ಷಸ;
ನಾಡಿ-ಅಂತ್ಯ; ಯೋನಿ-ಮೂಷಕ;
ವರ್ಣ — ಕ್ಷತ್ರಿಯ; ವಶ್ಯ-ವನಚರ;

ಈ ಕುಂಡಲಿಗಳಲ್ಲಿ ಇಬ್ಬರದೂ ಭಿನ್ನ ಭಿನ್ನ ನಾಡಿ ಇರುವದರಿಂದ ೮ ಗುಣ; ನವಪಂಚಕ ಇರುವುದರಿಂದ ಕೂಟವಿಚಾರಕ್ಕೆ ಶೂನ್ಯ ಗುಣ; ಇಬ್ಬರದೂ ಒಂದೇ ಗಣವಿರುವುದರಿಂದ ೬ ಗುಣ; ಗ್ರಹಮಿತ್ರತ್ವವಿರುವುದರಿಂದ ೫ ಗುಣ; (ಗುರು ಮತ್ತು ರವಿ ಮಿತ್ರರು) ಶ್ವಾನ-ಮೂಷಕ. ಯೋನಿ ವಿಚಾರಕ್ಕೆ ೨ ಗುಣ; ತಾರಾ ವಿಚಾರಕ್ಕೆ ೧ ಗುಣ; ಮಾನವ ವನಚರವಿರುವುದರಿಂದ ವಶ್ಯ ವಿಚಾರಕ್ಕೆ ಶೂನ್ಯಗುಣ; ಇಬ್ಬರದೂ ಒಂದೇ ವರ್ಣವಿರುವುದರಿಂದ ೧ ಗುಣ-ಹೀಗೆ ೨೩ ಗುಣಗಳು ಬರುತ್ತವೆ. ಮೇಲಾಗಿ ಇಬ್ಬರಿಗೂ ಕುಜದೋಷವಿರುತ್ತವೆ; ಆದುದರಿಂದ ಇಂತಹ ಜೋಡಿಯು ವಿವಾಹ ಮಾಡಬಹುದು.

## ಮಾದರಿ ೪

**ವಧು**

| | | | |
|---|---|---|---|
| ಶ | | ಚಂ | ಲ ರಾ |
| | | | |
| | | | ಗು |
| ಕೇ | | ರ ಬು | ಮ ಶು |

**ವರ**

| | | | |
|---|---|---|---|
| ಮ ಶು | ಕೇ | ಗು | |
| ಬು | | | |
| ಚಂ ಲ ಶ ರ | | | |
| | | ರಾ | |

**ನಕ್ಷತ್ರ**—ಕೃತ್ತಿಕಾ: ಚರಣ-೩:
**ರಾಶಿ** – ವೃಷಭ: ಗಣ–ರಾಕ್ಷಸ:
**ನಾಡಿ** – ಅಂತ್ಯ: ಯೋನಿ-ಮೇಷ,
**ವರ್ಣ**—ವೈಶ್ಯ: ವಶ್ಯ-ಚತುಷ್ಪಾದ

**ನಕ್ಷತ್ರ** – ಧನಿಷ್ಠಾ; ಚರಣ-೧
**ರಾಶಿ** – ಮಕರ: ಗಣ – ರಾಕ್ಷಸ:
**ನಾಡಿ** – ಮಧ್ಯ: ಯೋನಿ-ಸಿಂಹ;
**ವರ್ಣ** – ವೈಶ್ಯ: ವಶ್ಯ–ಜಲಚರ;

ಇಲ್ಲಿ ನಾಡಿ ಮೊದಲಾದ ಯಾವ ದೋಷವೂ ಇಲ್ಲ. ಅಲ್ಲದೆ ೨೪ ಗುಣಗಳು ಕೂಡಿ ಬರುತ್ತವೆ. ಹಾಗೂ ವಧುವಿನ ಕುಂಡಲಿಯಲ್ಲಿ ಕುಜ ದೋಷವಿದೆ. (ಮಂಗಳನಿದ್ದಾನೆ); ವರನ ಕುಂಡಲಿಯಲ್ಲಿ ದೋಷೀ ಮಂಗಳನಿಲ್ಲ. ಆದರೂ ವರನ ಕುಂಡಲಿಯಲ್ಲಿ ಪಾಪಗ್ರಹವಾದ ಶನಿಯು ಸ್ವಕ್ಷೇತ್ರೀ ಹಾಗೂ ಲಗ್ನದಲ್ಲಿ ಇದ್ದು, ವಧುವಿನ ಕುಂಡಲಿಯಲ್ಲಿದ್ದ ಕುಜನು ಶತ್ರು–ಕ್ಷೇತ್ರಿಯೂ ನಿರ್ಬಲನೂ ಇರುವುದರಿಂದ, ಕುಜದೋಷ ಎಣಿಸದೆ ವಿವಾಹ ಮಾಡಬಹುದು.

## ಮಾದರಿ ೫

**ವಧು**

| ಶ | | ರಾ | ಬು ಶು |
|---|---|---|---|
| | | | ರ ಗು ಮಂ ಲ |
| | | | |
| ಚಂ | ಕೇ | | |

**ವರ**

| ಮಂ | ಕೇ | | |
|---|---|---|---|
| ಬು ಶು | | | |
| ಲ ರ ಚಂ ಗು | | | |
| | | ರಾ | ಶ |

**ನಕ್ಷತ್ರ** – ಮೂಲಾ; ಚರಣ—೨;
**ಗಣ** – ರಾಕ್ಷಸ; ನಾಡಿ-ಆದ್ಯ;
**ಯೋನಿ**—ಶ್ವಾನ; ರಾಶಿ-ಧನು;
**ವರ್ಣ** –ಕ್ಷತ್ರಿಯ; ವಶ್ಯ-ಮಾನವ

**ನಕ್ಷತ್ರ** – ಧನಿಷ್ಠಾ: ಚರಣ ೧;
**ರಾಶಿ** – ಮಕರ: ಗಣ—ರಾಕ್ಷಸ;
**ನಾಡಿ**–ಮಧ್ಯ; ಯೋನಿ–ಸಿಂಹ;
**ವರ್ಣ**—ವೈಶ್ಯ; ವಶ್ಯ-ಜಲಚರ;

ನಾಡಿ ಭಿನ್ನವಿದ್ದು, ನಾಡಿ ಮೊದಲಾದವುಗಳಿಂದ ೨೧ ಗುಣಗಳು ಕೂಡಿ ಬರುತ್ತವೆ, ವಧುವಿನ ಕುಂಡಲಿಯಲ್ಲಿ ಮಂಗಳನಿದ್ದು (ದೋಷೀಕುಜ) ವರನ ಕುಂಡಲಿಯಲ್ಲಿ ಕುಜದೋಷ (ಮಂಗಳ) ಇರುವುದಿಲ್ಲ. ಆದರೂ ವಧುವಿನ ಕುಂಡಲಿಯಲ್ಲಿದ್ದ ಕುಜನು ಅಸ್ತನಿರುವುದರಿಂದ. ಕುಜದೋಷವೆಂದು ಎಣಿಸಬಾರದು. ಮೇಲಾಗಿ ವಧೂ–ವರರ ಲಗ್ನದಲ್ಲಿ(ತನುಸ್ಥಾನದಲ್ಲಿ)ಗುರುವು ಇರುವುದರಿಂದ ಕುಜದೋಷವನ್ನು ಎಣಿಸದೆ ವಿವಾಹವನ್ನು ನಿಶ್ಚಯಿಸಬೇಕು,

## ಮಾದರಿ ೬

**ವಧು**

| | | | |
|---|---|---|---|
| ಗು ಚಂ | | ಶ | |
| | | | ರಾ |
| ಕೇ | | | |
| | ರ | ಬು ಶು | ಲ ಮ |

**ವರ**

| | | | |
|---|---|---|---|
| ಶು | ರ ಬು | ಗು | ಚಂ ರಾ |
| | | | ಲ |
| | | | ಮ |
| ಕೇ | | | ಶ |

**ನಕ್ಷತ್ರ**—ರೇವತಿ; ಚರಣ ೧;
**ರಾಶಿ**—ಮೀನ; ನಾಡಿ—ಅಂತ್ಯ;
**ಗಣ**—ದೇವ; ಯೋನಿ- ಗಜ;
**ವರ್ಣ**—ವಿಪ್ರ; ವಶ್ಯ-ಜಲಚರ;

**ನಕ್ಷತ್ರ**—ಮೃಗಶಿರಾ; ಚರಣ ೪;
**ರಾಶಿ**—ಮಿಥುನ; ನಾಡಿ-ಮಧ್ಯ;
**ಗಣ**—ದೇವ; ಯೋನಿ—ಸರ್ಪ;
**ವರ್ಣ**—ಶೂದ್ರ; ವಶ್ಯ-ಮಾನವ;

ಈ ೬ನೆಯ ವಧೂವರರ ಕುಂಡಲಿಯನ್ನು ನೋಡಲಾಗಿ—ನಾಡಿ ಭಿನ್ನ ಭಿನ್ನವಿದೆ; ಆದುದರಿಂದ ೮ ಗುಣ; ಸತ್‌ಕೂಟವಿರುವುದರಿಂದ ೭ ಗುಣ; ಇಬ್ಬರೂ ಒಂದೇ ಗಣ ಇರುವುದರಿಂದ ೬ ಗುಣ; ಗ್ರಹಮಿತ್ರತ್ವಕ್ಕೆ ೧ ೧/೨ ಗುಣ (ಬುಧ ಗುರು ಶತ್ರು) ತಾರಾವಿಚಾರಕ್ಕೆ ೧॥ ಗುಣ; ವಶ್ಯ ವಿಚಾರಕ್ಕೆ ೧/೨ ಗುಣ; ವರ್ಣವಿಚಾರಕ್ಕೆ ಶೂನ್ಯ ಹೀಗೆ ಈ ಕುಂಡಲಿಗಳಿಗೆ ೨೪ ಗುಣಗಳು ಕೂಡಿಬರುತ್ತವೆ. ಆದರೆ ವಧುವಿಗೆ ದೋಷ ಮಂಗಳನಿರುವನು; ವರನಿಗೆ ಅಂತಹ ಮಂಗಳನಿಲ್ಲ ಎಂದು ಬಿಡಬಾರದು. ವಧುವಿನ ಕುಂಡಲಿಯ ಮಂಗಳನನ್ನು

ಸೂಕ್ಷ್ಮವಾಗಿ ನೋಡಿರಿ. ಆ ಮಂಗಳನು ಶತ್ರುಕ್ಷೇತ್ರದಲ್ಲಿದ್ದಾನೆ. ಹಾಗೂ ಬಲಾಢ್ಯ ಗುರುವು ಸಪ್ತಮದಲ್ಲಿ ಮತ್ತು ಗುರು-ಚಂದ್ರರ ಯುತಿ ಸಪ್ತಮದಲ್ಲಿ ಇರುವುದರಿಂದ. ವಧುವಿನ ಕುಂಡಲಿಯಲ್ಲಿದ್ದ ಕುಜನು ಮಾರಕ ನಾಗುವದಿಲ್ಲ; (ದೋಷಿ ಆಗಲಾರನು) ಆದುದರಿಂದ ಈ ಜೋಡಿಯು ವಿವಾಹ ಮಾಡಲು ಯಾವ ಅಭ್ಯಂತರವೂ ಇರುವುದಿಲ್ಲ.

**ಮಾದರಿ ೭**

ವಧು

| ಶ | | ಗು ಶು | |
|---|---|---|---|
| | | | ರಾರ<br>ಬು |
| ಲ<br>ಕೇ | | | ಚಂ |
| ಮಂ | | | |

ವರ

| ಮಂ | ಗು | | ರಾ |
|---|---|---|---|
| | | | |
| ಶ | | | ಚಂ |
| ಕೇ | | ಶು | ಲ<br>ಬು ರ |

ನಕ್ಷತ್ರ—ಮಘಾ; ಚರಣ–೧;
ರಾಶಿ – ಸಿಂಹ; ಗಣ-ರಾಕ್ಷಸ;
ನಾಡಿ – ಅಂತ್ಯ; ಯೋನಿ-ಮೂಷಕ
ವರ್ಣ—ಕ್ಷತ್ರಿಯ; ವಶ್ಯ-ವನಚರ

ನಕ್ಷತ್ರ—ಮಘಾ; ಚರಣ–೩;
ರಾಶಿ—ಸಿಂಹ; ಗಣ–ರಾಕ್ಷಸ;
ನಾಡಿ—ಅಂತ್ಯ; ಯೋನಿ-ಮೂಷಕ
ವರ್ಣ—ಕ್ಷತ್ರಿಯ; ವಶ್ಯ-ವನಚರ

ಈ ಕುಂಡಲಿಗಳನ್ನು (ಜಾತಕ) ನೋಡಿರಿ. ಇಬ್ಬರ ಕುಂಡಲಿಯಲ್ಲಿಯೂ ಮಂಗಳನಿದ್ದಾನೆ (ಕುಜದೋಷ); ಆದರೆ ಇಬ್ಬರದೂ ಒಂದೇ ನಾಡಿ ಎಂದು ಎಷ್ಟೋ ಜನರು ಈ ಜೋಡಿಯನ್ನು ಒಪ್ಪುವದಿಲ್ಲ, ಆದರೆ ಸೂಕ್ಷ್ಮದೃಷ್ಟಿ ಯಿಂದ ಪರಿಶೀಲಿಸಿರಿ. ಇಬ್ಬರದೂ ರಾಶಿ ನಕ್ಷತ್ರ ಒಂದೇ ಇದ್ದು ಚರಣ ಭಿನ್ನ ಭಿನ್ನವಿದೆ. ಅಂದರೆ ಇಂಥ ಕುಂಡಲಿಗೆ ೩೨ ಗುಣಗಳು ಬರುತ್ತವೆ. ಆದುದರಿಂದ ಇಂತಹ ಜೋಡಿಗಳ ವಿವಾಹ ಮಾಡಬಹುದು:

## ಮಾದರಿ ೮

ವಧು

| | | | |
|---|---|---|---|
| | ಲ | ಚಂ | |
| ಶ | | | ಕೇ |
| ರಾ | | | ರ ಶು ಬು |
| ಮಂ | ಗು | | |

ನಕ್ಷತ್ರ—ಮೃಗಶಿರಾ; ಚರಣ-೧;
ರಾಶಿ—ವೃಷಭ; ನಾಡಿ-ಮಧ್ಯ ;
ಗಣ—ದೇವ; ಯೋನಿ-ಸರ್ಪ;
ವರ್ಣ-ವೈಶ್ಯ, ವಶ್ಯ-ಚತುಷ್ಪಾದ;

ವರ

| | | | |
|---|---|---|---|
| ರಾ | | ಲ ಬು ರ | ಶು ಚಂ |
| | | | ಗು |
| ಶ | | | |
| | | | ಮಂ ಕೇ |

ನಕ್ಷತ್ರ—ಮೃಗಶಿರಾ, ಚರಣ-೪;
ರಾಶಿ—ಮಿಥುನ, ನಾಡಿ-ಮಧ್ಯ;
ಗಣ—ದೇವ, ಯೋನಿ-ಸರ್ಪ;
ವರ್ಣ—ಶೂದ್ರ, ವಶ್ಯ-ಮಾನವ

ಈ ಕುಂಡಲಿಗಳನ್ನು ನೋಡಿರಿ. ವಧೂ-ವರರದು ಒಂದೇ ನಾಡಿ ಆಗುವುದೆಂದು ಬಿಟ್ಟು ಬಿಡಬಹುದು. ಸೂಕ್ಷ್ಮವಾಗಿ ಪರಿಶೀಲಿಸಲಾಗಿ ವಧೂ-ವರರದು ನಕ್ಷತ್ರ ಒಂದೇ ಇದ್ದರೂ ಭಿನ್ನ ಭಿನ್ನ ರಾಶಿಗಳಾಗುತ್ತವೆ. (ವೃಷಭ, ಮಿಥುನ)ಆದ್ದರಿಂದ ಇಲ್ಲಿ ೩೬ ಗುಣಗಳನ್ನು ಹಿಡಿಯಬೇಕು. ಮೇಲಾಗಿ ಇಬ್ಬರಿಗೂ ಕುಜದೋಷವಿರುವದಿಲ್ಲ. ಆದ್ದರಿಂದ ಇಂತಹ ಜೋಡಿಯ ವಿವಾಹ ಮಾಡಲು ಯಾವ ಅಭ್ಯಂತರವೂ ಇರುವದಿಲ್ಲ.

## ಮಾದರಿ ೯

ವಧು

| | | | |
|---|---|---|---|
| ಮಂ | ಕೇ | ಚಂ | |
| ಬು ಶು | | | |
| ರ ಗು ಲ | | | |
| | | ರಾ | ಶ |

ವರ

| | | | |
|---|---|---|---|
| | ಕೇ | | |
| ಬು ಶು | | | ಮಂ |
| ಲ ರ ಶ | | | ಚಂ |
| ಗು | | ರಾ | |

ನಕ್ಷತ್ರ—ಕೃತ್ತಿಕಾ: ಚರಣ ೩;
ರಾಶಿ—ವೃಷಭ; ಗಣ—ರಾಕ್ಷಸ
ನಾಡಿ—ಅಂತ್ಯ; ಯೋನಿ-ಮೇಷ;
ವರ್ಣ—ವೈಶ್ಯ,ವಶ್ಯ-ಚತುಷ್ಪಾದ

ನಕ್ಷತ್ರ—ಮಘಾ, ಚರಣ—೩
ರಾಶಿ—ಸಿಂಹ; ಗಣ—ರಾಕ್ಷಸ;
ನಾಡಿ—ಅಂತ್ಯ, ಯೋನಿ-ಮೂಷಕ
ವರ್ಣ—ಕ್ಷತ್ರಿಯ, ವಶ್ಯ-ವನಚರ

ಇಲ್ಲಿ ವಧೂವರರದು ಏಕನಾಡಿ ಇರುವುದರಿಂದ, ಜನ್ಮಟಿಪ್ಪಣಿ ಕೂಡಿ ಬರುವುದಿಲ್ಲ. ಆದ್ದರಿಂದ ಇಂತಹ ವಿವಾಹ ಸರ್ವಥಾ ಮಾಡಬಾರದು.

**ವಿಶೇಷ ಸೂಚನೆ :** ವಧೂವರರಲ್ಲಿಯ ಯಾರೊಬ್ಬರ ಕುಂಡಲಿಯಲ್ಲಿ (ಜಾತಕ) ದೋಷೀ ಕುಜ (ಮಂಗಳ) ನಿದ್ದು, ಇನ್ನೊಬ್ಬರ ಕುಂಡಲಿಯಲ್ಲಿ ಕುಜದೋಷ ಇರದೆ ಇದ್ದರೆ, ವಿವಾಹ ಮಾಡಬೇಕೋ ಅಥವಾ ಮಾಡಬಾರದೋ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇಂತಹ ಪ್ರಸಂಗದಲ್ಲಿ ಒಂದು ಸಂಗತಿಯನ್ನು ಲಕ್ಷ್ಯದಲ್ಲಿಡಬೇಕು; ಏನೆಂದರೆ ಜನ್ಮಲಗ್ನದಿಂದ ೧-೪-೭-೮-೧೨ ಈ ಸ್ಥಾನಗಳಲ್ಲಿ ರಾಹು ಅಥವಾ ಶನಿ ಇದ್ದು, ಲಗ್ನ ಇಲ್ಲವೇ ಸಪ್ತಮದಲ್ಲಿ ಬಲಾಢ್ಯ ಶುಭಗ್ರಹಗಳು ಹಾಗೂ ಲಗ್ನಾಧಿಪತಿ ಸಪ್ತಮಾಧೀಶ ಮತ್ತು ಚಂದ್ರ

ಬಲವಂತರಾಗಿದ್ದರೆ, ವಿವಾಹಕ್ಕೆ ಯಾವ ಅಭ್ಯಂತರವೂ ಇಲ್ಲ. ಆದರಂತೆಯೆ ದೋಷಿಕುಜ (ಮಾರಕಮಂಗಳ) ನೆಂದು ಹೇಳುವ ಆ ಮಂಗಳನು ಅಸ್ತಂಗತ, ನಿರ್ಬಲಿ. ವಕ್ರೀ ವೃದ್ಧಾಪ್ಯದವ, ಕ್ಷೀಣ ಇದ್ದು, ಶುಭಗ್ರಹಗಳಿಂದ ನೋಡಲ್ಪಡುತ್ತಿದ್ದರೆ ಮಾತ್ರ ಇನ್ನೊಬ್ಬರ ಕುಂಡಲಿಯಲ್ಲಿಯ ಲಗ್ನಾಧಿಪತಿಯು ಬಲವಂತನಿದ್ದರೆ, ವಿವಾಹ ಮಾಡಬಹುದು. ಆದರೆ ಅದೇ ಕುಜನು ಬಲವಂತನಿದ್ದು, ಕ್ರೂರ ನಕ್ಷತ್ರಗಳಲ್ಲಿ ಇದ್ದುದಾದರೆ, ಪಾಪಗ್ರಹಗಳಿಂದ ನೋಡಲ್ಪಡುತ್ತಿದ್ದರೆ ಲಗ್ನಾಧಿಪತಿ, ಸಪ್ತಮಾಧಿಪತಿ ಹಾಗೂ ಶುಕ್ರ, ಚಂದ್ರ, ಗುರು ಇವರು ನಿರ್ಬಲರಾಗಿದ್ದರೆ, ಇಂತಹ ಕುಂಡಲಿಯಲ್ಲಿ ಮಂಗಳನಿಗೆ ಮಂಗಳನನ್ನೇ ಅಥವಾ ಶನಿ ರಾಹುಗಳನ್ನು ನೋಡಿ ವಿವಾಹ ಮಾಡಬೇಕು, ಹಾಗೂ ಏಕನಾಡಿಯನ್ನು ಸಹ ಸೂಕ್ಷ್ಮವಾಗಿ ಪರಿಶೀಲಿಸಬೇಕು.

---

# ೯. ವಿವಾಹಯೋಗ

## ೧

| ವಧು |
|---|
| ಶಕೆ ೧೮೫೩ ಚೈತ್ರ ಶುದ್ಧ ಚತುರ್ಥಿ, ಕೃತ್ತಿಕಾ ೧ |

| | | | |
|---|---|---|---|
| ರ ರಾ ಬು | ಚಂ | | ಲ ಗು |
| ಶು | | | ಮಂ |
| ಶ | | | |
| | | | ಕೇ |

| ವರ |
|---|
| ಶಕೆ ೧೮೪೭ ಆಶ್ವಿನ ವದ್ಯ ೮ ಪುನರ್ವಸು ೩ |

| | | | |
|---|---|---|---|
| | | | ಲ ಚಂ |
| | | | ರಾ |
| ಕೇ | | | |
| ಗು | ಶು | ಶ | ಮಂ ರ ಬು |

ಮೇಲೆ ಕೊಟ್ಟ ವಧೂವರರಿಬ್ಬರ ಕುಂಡಲಿಗಳನ್ನೂ ಪರಿಶೀಲಿಸಿರಿ. ಇವರ ವಿವಾಹವು ಶಕೆ ೧೮೭೨ ಮಾರ್ಗಶೀರ್ಷ ಶುದ್ಧ ದಶಮಿ ಪ್ರಾತಃಕಾಲ ಮಿಥುನ ಲಗ್ನದಲ್ಲಿ (೧೮-೧೨-೧೯೫೦) ಆಗಿದೆ. ಆ ದಿನದ (ಆ ತಿಂಗಳು, ಆ ವರ್ಷದ ಗ್ರಹಸ್ಥಿತಿ ಈ ಕೆಳಗಿನಂತೆ ಇರುತ್ತದೆ.

### ಆ ದಿನದ ಗ್ರಹಗಳ ಸ್ಥಿತಿ-ಗತಿ

ಚಂದ್ರನು ಮೀನರಾಶಿಯಲ್ಲಿ, ರವಿ, ಬುಧ, ಶುಕ್ರರು ಧನು ರಾಶಿಯಲ್ಲಿ, ಕುಜನು ಮಕರರಾಶಿಯಲ್ಲಿ ಗುರುವು ಕುಂಭರಾಶಿಯಲ್ಲಿ, ಶನಿ ಹಾಗೂ ಕೇತು ಕನ್ಯಾರಾಶಿಯಲ್ಲಿ, ರಾಹು ಮೀನರಾಶಿಯಲ್ಲಿ.

ಮೊದಲು ಎರಡೂ ಕುಂಡಲಿಗಳಲ್ಲಿಯ ಯೋಗಗಳನ್ನು ನೋಡೋಣ. ಮುಖ್ಯತಃ ವಧುವಿಗೆ ಕುಜದೋಷವಿಲ್ಲ. ವರನಿಗೆ ಕುಜದೋಷವಿದ್ದ ಹಾಗೆ ತೋರುತ್ತದೆ. ಆದರೆ ಸೂಕ್ಷ್ಮವಾಗಿ ಅವಲೋಕಿಸಲು ಕುಜದೋಷವಿಲ್ಲ. ಇದಕ್ಕೆ ಕಾರಣವಿಷ್ಟೇ: (೧) ಸಪ್ತಮದಲ್ಲಿ ಬಲಾಢ್ಯ ಗುರು. (೨) ಗುರು-

ಚಂದ್ರರ ಸಮಸಪ್ತಕವು ಲಗ್ನ ಹಾಗೂ ಸಪ್ತಮ ಸ್ಥಾನಗಳಲ್ಲಿ, (೩) ಕುಜನು ಶತ್ರುಕ್ಷೇತ್ರೀ ಅಸ್ತ ಹಾಗೂ ವೃದ್ಧಾಪ್ಯಾವಸ್ಥೆ. (೪) ವಧೂವರರಿಬ್ಬರ ಕುಂಡಲಿಗಳಲ್ಲಿಯೂ ಗುರುವಿನ ದೃಷ್ಟಿ ಸಪ್ತಮದಲ್ಲಿ. ಮೇಲಾಗಿ ೨೫ ಗುಣಗಳು ಕೂಡಿ ಬರುತ್ತವೆ. (ಕೃತ್ತಿಕಾ ೧, ಪುನರ್ವಸು ೩).

## ಜನ್ಮ ಕುಂಡಲಿಯಲ್ಲಿದ್ದ ಯೋಗಗಳು

### ವಧುವಿನ ಕುಂಡಲಿಯಲ್ಲಿ

(೧) ಸಪ್ತಮಾಧಿಪತಿಯಾದ ಗುರುವು ಲಗ್ನದಲ್ಲಿ. (೨) ಪಂಚಮಾಧೀಶನಾದ ಶುಕ್ರನು ಭಾಗ್ಯದಲ್ಲಿ. (೩) ಕುಂಡಲಿಯಲ್ಲಿ ಕುಜದೋಷವಿಲ್ಲ. ಹೀಗಿರುವುದರಿಂದ ಈ ವಧುವಿನ ವಿವಾಹ ಶೀಘ್ರ ಆಗುತ್ತದೆ ಎಂದು ಹೇಳಬಹುದು.

### ವರನ ಕುಂಡಲಿಯಲ್ಲಿ

೧. ಸಪ್ತಮಾಧಿಪತಿಯಾದ ಗುರುವು ಸಪ್ತಮದಲ್ಲಿ,

೨. ಗುರು-ಚಂದ್ರರ ಸಮಸಪ್ತಕವು ಲಗ್ನ ಹಾಗೂ ಸಪ್ತಮದಲ್ಲಿ,

೩. ಭಾಗ್ಯಾಧೀಶನು ಸಪ್ತಮದಲ್ಲಿ ಉಚ್ಚನಾಗಿ ಹೀಗೆ ಯೋಗವಿರುವುದರಿಂದ ವಿವಾಹ ತೀವ್ರ ಆಗುತ್ತದೆ ಎಂದು ಹೇಳಬಹುದು.

### ಗೋಚರೀ ಗ್ರಹಗಳ ಪರಿಭ್ರಮಣ ಹಾಗೂ ಪರಿಣಾಮ

ವಧುವಿನ ಕುಂಡಲಿಯಲ್ಲಿಯ ಮೇಲಿಂದ ಶಕೆ ೧೮೭೨ರಲ್ಲಿ (೧) ಗುರುವಿನ ಭ್ರಮಣಭಾಗ್ಯದಲ್ಲಿ, (೨) ಮೂಲ ಗುರುವಿನೊಡನೆ ಗೋಚರೀ ಗುರುವಿನ ಯೋಗ ಸಮಸಪ್ತಕವಾಗಿ, (೩) ಸಪ್ತಮಾಧಿಪತಿಯಾದ ಶುಕ್ರನೊಡನೆ ಗೋಚರೀ ಗುರುವಿನ ಯೋಗ ಭಾಗ್ಯದಲ್ಲಿ, (೪) ಸಪ್ತಮಾಧಿಪತಿಯಾದ ಗುರುವಿನೊಡನೆ ಸಮಸಪ್ತಕವು ಗೋಚರೀ ಶುಕ್ರನದು. (೫) ಗೋಚರೀ ಗುರು ಚಂದ್ರನಿಂದ ೧೧ನೇಯವನು. ಹಾಗೂ ಇತರ ಗ್ರಹಗಳು ಸಹ ಶುಭದಾಯಕರು, (೬) ಕುಜನ ಮಹರ್ ದಿಶೆಯಲ್ಲಿ ಶುಕ್ರನ ಅಂತರ್ದಶೆ.

### ವರನ ಕುಂಡಲಿಯ ಮೇಲಿಂದ ಗೋಚರೀ ಗ್ರಹಗಳ ಪರಿಭ್ರಮಣ

(೧) ಸಪ್ತಮಾಧಿಪತಿಯ ಭ್ರಮಣವು ಭಾಗ್ಯದಲ್ಲಿದ್ದ ಕಾರಣ, (೨)ಲಗ್ನದಿಂದ ಹಾಗೂ ಚಂದ್ರನಿಂದ ಗೋಚರೀ ಗುರು ೯ನೆಯವನಾಗಿ, (೩) ಮೂಲ

ಗುರುವಿನೊಂದಿಗೆ ಪಂಚಮಾಧೀಶನಾದ ಶುಕ್ರನ ಗೋಚರೀ ಯೋಗ ಹಾಗೂ ಮೂಲ ಶುಕ್ರನಿಂದ ಗೋಚರೀ ಶುಕ್ರ ದ್ವಿತೀಯನಾಗಿ ಸಪ್ತಮದಲ್ಲಿ. (೪) ಸಪ್ತಮಸ್ಥಾನದಲ್ಲಿ ಶುಕ್ರನ ಭ್ರಮಣ ಹಾಗೂ ಮೂಲಚಂದ್ರನೊಂದಿಗೆ ಸಮಸಪ್ತಕನಾಗಿ. (೫) ಲಗ್ನಾಧಿಪನ ದಶೆಯಲ್ಲಿ ಭಾಗ್ಯೇಶನ ಅಂತರ್ದಶೆ ಹೀಗೆ ವಿವಾಹಕಾಲವನ್ನು ನಿರ್ಧರಿಸಲು ಬರುವುದು ಶಕೆ ೧೮೭೨ರಲ್ಲಿ ವಧೂವರರಿಗೆ ಬಲವಾದ ಗ್ರಹಗಳು ಬಂದದ್ದರಿಂದ, ಆ ವರುಷ ಅವರ ವಿವಾಹ ಜರುಗಿತು. ಇನ್ನು ವಿವಾಹ ಯಾವ ಮಾಸದಲ್ಲಿ ಆಗಬಹುದು ? ಈ ಪ್ರಶ್ನೆಯನ್ನು ರವಿ ಅಥವಾ ಶುಕ್ರನಿಂದ ಹೇಳಬಹುದು. ಯಾವ ಮಾಸದಲ್ಲಿ ರವಿ–ಶುಕ್ರರು ಬಲವಂತರಿರುವರೋ, ಆ ಮಾಸದಲ್ಲಿ ವಿವಾಹ ಜರುಗುವದು. ಜನ್ಮಸ್ಥ ರವಿ ಶುಕ್ರರು ಅಥವಾ ಲಗ್ನ, ಪಂಚಮ, ಸಪ್ತಮ, ನವಮ, ಲಾಭ ಈ ಸ್ಥಾನಗಳಲ್ಲಿ ರವಿ-ಶುಕ್ರರ ಪರಿಭ್ರಮಣ ಅಥವಾ ಸಪ್ತಮಾಧಿಪತಿಯಿಂದ ೨-೫-೭-೯-೧೧ ಈ ಸ್ಥಾನಗಳಲ್ಲಿ ಗೋಚರೀ ರವಿ-ಶುಕ್ರರು ಬಂದಾಗ ವಿವಾಹವು ಜರಗುತ್ತದೆ.

## ವಿವಾಹ ಯೋಗ

ವಧು ೨ ವರ

೧೮೭೦ ವೈಶಾಖ ಕೃ. ೧೪ ಶನಿವಾರ ರಾತ್ರಿ ೧೧॥ ಕೃತ್ತಿಕಾ ೩

| | | | |
|---|---|---|---|
| ರ | ಬು | ಚಂ ಕೇ ರ | ಶು ಮಂ |
| ಲ ಗು | | | |
| | | | |
| | | ರಾ | |

೧೮೫೩ ಅಧಿಕ ಆಷಾಢ ಕೃ. ೫ ಪೂ. ಭಾ. ೧

| | | | |
|---|---|---|---|
| ರಾ | | | ರ ಶು ಬು |
| ಚಂ | | | ಗು |
| | | | ಮಂ |
| ಶ | | ಲ | ಕೇ |

ಮೇಲೆ ಕೊಟ್ಟ ವಧೂವರರ ಕುಂಡಲಿಗಳನ್ನು ಪರಿಶೀಲಿಸಿರಿ. ಇವರ ವಿವಾಹವು ಶಕೆ ೧೮೭೭ ವೈಶಾಖ ಶು. ೩ ಮಿಥುನ ಲಗ್ನದಲ್ಲಿಯಾಗಿದೆ. ಆ ದಿನದ ಗ್ರಹಸ್ಥಿತಿಗಳು ಈ ಕೆಳಗಿನಂತೆ ಇರುತ್ತವೆ.

ಚಂದ್ರನು ಧನುವಿನಲ್ಲಿ ರವಿ, ಬುಧ, ಕೇತುಗಳು ವೃಷಭದಲ್ಲಿ, ಗುರು ಸಿಂಹದಲ್ಲಿ, ಶುಕ್ರನು ಮಿಥುನದಲ್ಲಿ, ಶನಿ, ರಾಹುಗಳು ವೃಶ್ಚಿಕದಲ್ಲಿ ಕುಜನು ಕುಂಭದಲ್ಲಿ.

## ಕುಂಡಲಿಯ ಮೂಲಯೋಗಗಳು

ವಧುವಿನ ಕುಂಡಲಿಯಲ್ಲಿ (೧) ಲಗ್ನದಲ್ಲಿ ಗುರು, (೨) ಸಪ್ತಮಾಧಿಪತಿಯಾದ ಶುಕ್ರನು ಪಂಚಮದಲ್ಲಿ ಮಿತ್ರನ ಮನೆಯಲ್ಲಿ–ಗುರುವಿನ ದೃಷ್ಟಿಯಲ್ಲಿ, (೩) ಕುಜದೋಷವಿಲ್ಲದ ಕುಂಡಲಿ–ಹೀಗೆ ಯೋಗವಿರುವುದರಿಂದ, ಈ ವಿವಾಹ ತೀವ್ರ ಆಗುವುದೆಂದು ಹೇಳಲು ಯಾವ ಅಭ್ಯಂತರವಿಲ್ಲ.

(೧) ವರನ ಕುಂಡಲಿಯಲ್ಲಿ ಲಗ್ನಾಧಿಪತಿಯಾದ ಶುಕ್ರನು ಭಾಗ್ಯಾಧಿಪತಿಯೊಂದಿಗೆ ಭಾಗ್ಯದಲ್ಲಿ.

(೨) ತೃತೀಯಾಧೀಶನು ಉಚ್ಚನಾಗಿ ದಶಮದಲ್ಲಿ.

(೩) ಕುಜದೋಷವಿಲ್ಲದ ಕುಂಡಲಿ.

ಗೋಚರೀಗ್ರಹಗಳ ಪರಿಣಾಮ ಹಾಗೂ ಪರಿಭ್ರಮಣ ವಧುವಿನ ಕುಂಡಲಿಯಲ್ಲಿ.

(೧) ಸಪ್ತಮಸ್ಥಾನದಲ್ಲಿ ಗುರುವಿನ ಪರಿಭ್ರಮಣವಿದ್ದುದರಿಂದ.

(೨) ಮೂಲಶುಕ್ರನೊಂದಿಗೆ ಗೋಚರೀ ಶುಕ್ರನ ಯೋಗ.

(೩) ಮೂಲರವಿಯೊಂದಿಗೆ ಗೋಚರೀ ರವಿಯ ಯೋಗ.

೪) ಮೂಲ ಗುರುವಿನೊಂದಿಗೆ ಗೋಚರಿಗುರುವಿನ ಸಮಸಪ್ತಕ ಲಗ್ನ ಹಾಗೂ ಸಪ್ತಮದಲ್ಲಿ.

(೫) ಕುಜನು ಗೋಚರಿಯಿಂದ ಗುರುವಿನೊಂದಿಗೆ ಯೋಗಕಾರಕನು ಹಾಗೂ ಗೋಚರೀಗುರುವಿನೊಂದಿಗೆ ಸಮಸಪ್ತಕನು.

೬) ಸಪ್ತಮಾಧೀಶನಾದ ರವಿಯ ಅಂತರ್‌ದಶೆ ಕುಜನ ಮಹಾದಶೆಯಲ್ಲಿ.

ವರನ ಕುಂಡಲಿಯಲ್ಲಿ ಗೋಚರೀಗ್ರಹಗಳ ಪರಿಭ್ರಮಣ ಹಾಗೂ ಪರಿಣಾಮ :

(೧) ಗೋಚರೀಗುರುವಿನ ಪರಿಭ್ರಮಣ ಲಾಭದಲ್ಲಿ ಹಾಗೂ ಮೂಲ ಗುರುವಿನಿಂದ ದ್ವಿತೀಯನಾಗಿ ಇರುವುದರಿಂದ —

(೨) ಮೂಲಚಂದ್ರನೊಂದಿಗೆ ಗೋಚರೀಗುರುವು ಸಮಸಪ್ತಕನಾಗಿ ಪಂಚಮ ಹಾಗೂ ಲಾಭದಲ್ಲಿ—

(೩) ಮೂಲಶುಕ್ರ ಹಾಗೂ ಬುಧ-ರವಿಗಳೊಂದಿಗೆ ಗೋಚರೀ ಶುಕ್ರನ ಯೋಗ—

(೪) ಸಪ್ತಮಾಧಿಪತಿಯಾದ ಕುಜನ ಪರಿಭ್ರಮಣ ಪಂಚಮದಲ್ಲಿ ಹಾಗೂ ಮೂಲ ಕುಜನೊಂದಿಗೆ ಸಮಸಪ್ತಕ ಯೋಗ—

(೫) ಗೋಚರಿಯಿಂದ ಶನಿಯು ೧೧ನೆಯವನು ಹಾಗೂ ಶನಿ ಮಹಾದಶೆಯಲ್ಲಿ ಲಗ್ನಾಧಿಪನಾದ ಶುಕ್ರನ ಅಂತರ್ದಶೆಯಲ್ಲಿ.

—ಮೇಲೆ ತೋರಿಸಿದಂತೆ ವಧೂವರರಿಗೆ ವಿವಾಹಯೋಗವಿತ್ತು.



# ಹಿನ್ನುಡಿ

ನಮ್ಮ ತರುಣೋತ್ಸಾಹಿ ಮಿತ್ರರಾದ ಶ್ರೀ ಜೋಗಳೇಕರರು, ವಧೂವರರ ಸಂಯೋಜನೆಗಾಗಿ ಫಲಿತಶಾಸ್ತ್ರದ ಉಚಿತವಾದ ಸಲಹೆ ಸಿಗುವುದಕ್ಕಾಗಿ ಒಂದು ಜ್ಯೋತಿಷ್ಯ ಪುಸ್ತಕವನ್ನು ಬರೆದು ಪ್ರಕಟಿಸುವ ಸಾಹಸವನ್ನು ಕೈಗೊಂಡಿರುವುದು ನಿಜವಾಗಿ ಸ್ತುತ್ಯವಾದ ಕಾರ್ಯವಾಗಿರುವುದು. ಯಾಕೆಂದರೆ ಇಂದಿನ ಸಮಾಜದಲ್ಲಿ ಕನ್ಯಾವಿವಾಹ ಸಮಸ್ಯೆ ಜಟಿಲವಾಗಿದೆ. ಸಮಾಜ ಶಾಸ್ತ್ರಜ್ಞರು ಈ ಸಮಸ್ಯೆಯನ್ನು ಬಿಡಿಸಲು ಉಚಿತವಾದ ಸಲಹೆಯನ್ನು ನೀಡುವಂತೆ ಜ್ಯೋತಿರ್ವಿದರು ಈ ಪ್ರಶ್ನವನ್ನು ಶಾಸ್ತ್ರೀಯ ರೀತಿಯಿಂದ ಬಿಡಿಸಲು ಸಹಕರಿಸಬೇಕು. ಜ್ಯೋತಿಷ್ಯ ಶಾಸ್ತ್ರವು ಪ್ರತಿಯೊಂದು ಸಮಸ್ಯೆಯನ್ನು ಬಿಡಿಸುವುದಕ್ಕೆ ಅನುಕೂಲ, ಪ್ರತಿಕೂಲ ಕಾಲವನ್ನು ಸೂಚಿಸುವುದು. ಅನುಕೂಲ ಕಾಲದಲ್ಲಿ ಮಾಡಿದ ಪ್ರಯತ್ನವು ಸಫಲವಾಗುವುದು. ಪ್ರತಿಕೂಲ ಕಾಲದಲ್ಲಿ ಮಾಡಿದ್ದು ವಿಫಲವಾಗುವದು. ಮಾಘನ ನುಡಿ 'ಪ್ರತಿಕೂಲತಾಮುಪಗತೇಹಿ ವಿನಾ ವಿಫಲತ್ವಮೇತಿ ಬಹು ಸಾಧನತಾಪಿ' ದಿಪ್ಪಜ್ಞರು ಪ್ರಯತ್ನವಾದವನ್ನು ಅಲ್ಲಗಳೆಯುವದಿಲ್ಲ. ಪ್ರತಿಕೂಲ ಕಾಲದಲ್ಲಿ ಸಾವಧಾನದಿಂದ ನಡೆಯಲಿಕ್ಕೆ ಸೂಚಿಸುವರು. ಸಾಯಣಾಚಾರ್ಯನು "ಪುರುಷಾಣಾಮಾಪದರ್ಣವೇ ಪೋತಃ" ಎಂದು ಈ ಶಾಸ್ತ್ರದ ಮಹಿತಿಯನ್ನು ಕೊಂಡಾಡಿರುವನು.

ಶ್ರೀ ಜೋಗಳೇಕರರು ಈ ಹೊತ್ತಿಗೆಯಲ್ಲಿ ಮೊದಲಿನ ಗ್ರಂಥಗಳಲ್ಲಿ ಉಲ್ಲಿಖಿತವಾದ ಅನೇಕ ಆಧಾರಗಳಿಂದ ವಧೂವರರ ಸಮಸ್ಯೆಯನ್ನು ಚರ್ಚಿಸಿರುವರು. ಆಧಾರವಿಲ್ಲದ ಯಾವುದನ್ನೂ ಬರೆದಿಲ್ಲ. ಆದರೆ ಈ ಸಮಸ್ಯೆಯನ್ನು ಬಿಡಿಸುವುದು ಅಷ್ಟು ಸುಲಭವಾಗಿರುವದಿಲ್ಲ. ದಾಂಪತ್ಯ ಯೋಗದ ಬಗ್ಗೆ ಸಹಾರಿಯಲರು ಮತ್ತು ಇತರ ಜ್ಯೋತಿರ್ವಿದರು ಮಹತ್ವದ ವಿಚಾರಗಳನ್ನು ತಮ್ಮ ಗ್ರಂಥಗಳಲ್ಲಿ ವ್ಯಕ್ತಪಡಿಸಿರುವರು. ಸಂಸ್ಕೃತ ಗ್ರಂಥಗಳಲ್ಲಿ ಉತ್ತಮವಾದ ಅಷ್ಟಕವರ್ಗಪದ್ಧತಿ– ವಿಶೇಷವಾಗಿ ಶುಕ್ರನ ಅಷ್ಟಕವರ್ಗ ಪದ್ಧತಿ ವಿವಾಹ ಸಮಸ್ಯೆಯನ್ನು ಬಿಡಿಸಲಿಕ್ಕೆ ಉತ್ತಮ ಬೆಳಕನ್ನು ಕೊಡು

ವುದು. ರಾಫೆಲರು ಸ್ತ್ರೀಯರ ಕುಂಡಲಿಯಲ್ಲಿ ರವಿ-ಗುರು ಸಮಕ್ರಾಂತಿ, ರವಿ-ಗುರು ತ್ರಿಕೋಣದ ತ್ರಿರೇಕಾದಶ ಯೋಗಗಳುಂಟಾದಾಗ (ದಿನವರ್ಷ ಪದ್ಧತಿಯಿಂದ) ಸ್ತ್ರೀಯರಿಗೆ ವಿವಾಹ, ಸಂತಾನಪ್ರಾಪ್ತಿ ಮೊದಲಾದ ಫಲಗಳನ್ನು ಕೊಡುವುವೆಂದು ಹೇಳುವರು. ಈ ನಿಯಮದಲ್ಲಿ ಬಹಳಷ್ಟು ಸತ್ಯಾಂಶವಿರುವುದು.

ಇಂಗ್ಲೀಷ್-ಸಂಸ್ಕೃತ ಭಾಷೆಗಳಲ್ಲಿ ವ್ಯಾಸಂಗಿಗಳಿಗೆ ಅತ್ಯುತ್ತಮವಾದ ಗ್ರಂಥಗಳು ಉಪಲಬ್ಧವಿರುವವು. ನಮ್ಮ ಉತ್ತರ ಕರ್ನಾಟಕದಲ್ಲಿ ಜ್ಯೋತಿಷ್ಯ ಶಾಸ್ತ್ರದ ಮೇಲೆ ಅರ್ಹವಾದ ಗ್ರಂಥಗಳು ಸಿಗುವುದಿಲ್ಲ. ಆದ್ದರಿಂದ ಈ ಕೊರತೆಯನು ನೀಗಿಸಲು ಶ್ರೀ ಜೋಗಳೇಕರರು ಪ್ರಯತ್ನಿಸಿರುವುದು ಪ್ರಶಂಸಾರ್ಹವಾಗಿರುವುದು. ವಧೂವರರ ಕುಂಡಲಿಯ ಪರೀಕ್ಷಣವನು ಹೇಗೆ ಶಾಸ್ತ್ರೀಯವಾಗಿ ಮಾಡಬೇಕು ? ಕುಜದೋಷವಿದೆಯೋ ಹೇಗೆ ? ಅವನ್ನು ವಿಚಾರಿಸುವ ಬಗೆ, ದಾಂಪತ್ಯ ಜೀವನದಲ್ಲಿ ಸಂಸಾರಿಕ ಸೌಖ್ಯ, ಸಂತಾನಪ್ರಾಪ್ತಿ ಇವೆಲ್ಲ ಸಿಗುವುದಕ್ಕೆ ದಾರಿ ಏನಾದರೂ ಇದೆಯೇ ? ಅಶುಭ ಯೋಗಗಳನ್ನು ಸೌಮ್ಯ ಮಾಡಿಕೊಳ್ಳುವುದು ಹೇಗೆ ? ಇವೆಲ್ಲದರಲ್ಲಿ ಜ್ಯೋತಿಷ್ಯ ಶಾಸ್ತ್ರವು ಪ್ರಕಾಶವನ್ನು ಬೀರುವುದು. ಈ ಶಾಸ್ತ್ರದ ವ್ಯಾಸಂಗ ಮಾಡದೆ ಅದರ ತಿರುಳು ತಿಳಿಕೊಳ್ಳದೆ ತಿರಸ್ಕರಿಸುವವರು ತಿರಸ್ಕರಿಸಲಿ. ಶುಭಾಸ್ತೇ ಪಂಥಾನಃ ಎಂದು ಅವರಿಗೆ ಹೇಳುವುದೇ ಒಳ್ಳೆಯದು.

ಪ್ರಶ್ನ ಮಾರ್ಗದಂತಹ ಕೇರಲೀಯ ಗ್ರಂಥದಲ್ಲಿ, ಗ್ರಹದೋಷ ನಿವಾರಣೆಗೆ ವೈದ್ಯ ಶಾಸ್ತ್ರದ ಸಹಾಯ ಹೋಮ-ಹವನಾದಿಗಳ ಸಹಾಯ ಅವಶ್ಯವೆಂದು ಬಹು ಮಾರ್ಮಿಕವಾಗಿ ಚರ್ಚಿಸಿರುವರು. ವಿದ್ಯಾರಣ್ಯರ ಕರ್ಮ ವಿಪಾಕ ಗ್ರಂಥವೂ ಪೂರ್ವಜನ್ಮದ ಪಾಪಕರ್ಮವನ್ನು ತೊಳೆಯಲಿಕ್ಕೆ ಮಾಡಬೇಕಾದ ಕಾರ್ಯಗಳನ್ನು ವಿವರಿಸುವುದು. ಪೂರ್ವಜನ್ಮದ ಕರ್ಮದಿಂದ ನಿವಾರಿಸಿಕೊಳ್ಳಬಹುದು.

"ಅತ್ಯುತ್ಕಟೈಃ ಪುಣ್ಯ ಇಹೈವ ಫಲಮಶ್ನುತೆ" ಇತ್ಯಾದಿ ವಚನಗಳಿಂದ ಪ್ರಯತ್ನವಾದವನ್ನು ಜ್ಯೋತಿಃಶಾಸ್ತ್ರವು ಮಂಡಿಸುತ್ತದಲ್ಲದೆ ಖಂಡಿಸುವುದಿಲ್ಲ.

ನಮಗೆ ಜ್ಯೋತಿಷ್ಯದ ಮೇಲೆ ವಿಶ್ವಾಸವಿಲ್ಲವೆನ್ನುವವರು ಕೂಡ ಆಪತ್ ಕಾಲ ಬಂದಾಗ, ನಿರ್ಲಜ್ಜರಾಗಿ ಜ್ಯೋತಿರ್ವಿದರ ಹತ್ತಿರ ಓಡಾಡುತ್ತವರು.

'ಸಂಪತ್ತಿಯಲ್ಲಿ ದಾಸಿ, ವಿಪತ್ತಿನಲ್ಲಿ ಜೋಶಿ' ಎಂಬ ಪುರಾಣಿಯ ಗಾದೆಯು ಮಾತು ಯಥಾರ್ಥವಾಗಿರುವುದು. ಆದ್ದರಿಂದ ವರಾಹಮಿಹಿರಾಚಾರ್ಯರು ಈ ಮನುಷ್ಯಸ್ವಭಾವವನ್ನು ಗುರುತಿಸಿ 'ಸಂನ್ಯಾಸಿನೋಽಪಿ ಪರಿಪೃಚ್ಛಂತಿ' ಎಂದು ಹೇಳಿರುವರು.

ಈಗಿನ ಕಾಲದಲ್ಲಿ ಜೋತಿಷ್ಯದ ಸತ್ಯದ ಪ್ರತೀತಿಯನ್ನು ಜನರಿಗೆ ಮನಗಾಣಿಸಿ ಕೊಡುವ ಗ್ರಂಥಗಳು ಕನ್ನಡದಲ್ಲಿ ಬರಬೇಕಾಗಿವೆ. ಅನುಭವ ವ್ಯಾಸಂಗಗಳು ಈ ಶಾಸ್ತ್ರದ ಅಭ್ಯಾಸಿಗೆ ಯಶಸ್ಸನ್ನು ಕೊಡುವವು.

ಈ ಶಾಸ್ತ್ರವು ಮಹಾಸಾಗರ. ಇದರಲ್ಲಿ ಜಿಗಿದು ಈಸುವ ಸಾಹಸವನ್ನು ಮಾಡುತ್ತಿರುವ ತರುಣರಿಗೆ ನಾವು ಆವಶ್ಯಕ ಸಹಾಯ-ಸಹಕಾರಗಳನ್ನು ನೀಡಬೇಕು. ಆಗ ಇಂತಹ ಶಾಸ್ತ್ರಾಭ್ಯಾಸಿಗಳಿಗೆ ಯಶಸ್ಸು ಸಿಗುವುದು. ಈ ಶಾಸ್ತ್ರವು ಅನೇಕ ಉತ್ಸರ್ಗ-ಅಪವಾದಗಳಿಂದ ಕೂಡಿರುವುದು. ಸತ್ಯನಿರ್ಣಯವು ಕಠಿಣವಾಗಿರುವುದೆಂದು ಅದನ್ನು ವಿಡಂಬನೆಗೆ ಪಾತ್ರ ಮಾಡುವುದು ಉಚಿತವಲ್ಲ. "ಗಚ್ಛತಃ ಸ್ಖಲನಂಕ್ವಾಪಿ ಭವತ್ಯೇವ ಪ್ರಮಾದತಃ" ಆದ್ದರಿಂದ ಶಾಸ್ತ್ರಕ್ಷೇತ್ರದಲ್ಲಿ ಸಂಚಾರವನ್ನು ಕೈಕೊಂಡವರನ್ನು ತೆಗಳುವುದರಲ್ಲಿ ಸ್ವಾರಸ್ಯವಿಲ್ಲ. 'ನಡೆದವರು ಎಡವುವಂತೆ ಕುಳಿತವರು ಎಡವುದಿಲ್ಲ.' ಆದ್ದರಿಂದ ಸ್ವಸ್ಥವಾಗಿ ಕುಳಿತವರು ಶಾಸ್ತ್ರವನ್ನು ನಿಂದಿಸುವುದರಲ್ಲಿ ಯಾವ ವಿಚಾರವೂ ಇಲ್ಲ. ಈ ತರುಣ ಅಭ್ಯಾಸಿಗಳಿಗೆ ಜನತೆ ಸಹಕಾರ ನೀಡಲಿ-ಎಂದು ನಾವು ಹಾರೈಸುವೆವು.

ಪಂಡಿತ ಕೇಶವಶರ್ಮಾ ಗಲಗಲಿ,
ಧಾರವಾಡ

೧೮-೧೧-೧೯೫೭